# ಮುನ್ನುಡಿ

ಹಿಂದೆ ಪ್ರಕಟವಾದ "ಹಳ್ಳಿಯ ಕಥೆಗಳು" ಮತ್ತು "ತುರಾಯಿ" ಎಂಬ ಕಥಾಸಂಕಲನಗಳ ವಿಷಯದಲ್ಲಿ ಕನ್ನಡ ಬಾಂಧವರು ತೋರಿಸಿದ ಪ್ರೀತ್ಯಾದರಗಳಿಂದ ಉತ್ತೇಜಿತನಾಗಿ ಅವರಿಗೆ ಕೃತಜ್ಞನಾಗಿದ್ದೇನೆ. ಈಗ ಈ ಎಂಟು ಕಥೆಗಳ ಸಂಕಲನವು ಹೊರಬಿದ್ದಿರುವುದು ಅವರ ಪ್ರೀತ್ಯಾದರಗಳ ಪರಿಣಾಮವಾಗಿಯೇ.

ಇವುಗಳಲ್ಲಿ ಏಳು ಕಥೆಗಳು ಕನ್ನಡನಾಡಿನ ಹಲವು ಪತ್ರಿಕೆಗಳಲ್ಲಿ ಹಿಂದೆ ಪ್ರಕಟವಾಗಿದ್ದುವು. ಈ ಉಪಕಾರಕ್ಕಾಗಿ ನಾನು ಆ ಪತ್ರಿಕೆಗಳ ಸಂಪಾದಕರಿಗೂ ವ್ಯವಸ್ಥಾಪಕರಿಗೂ ಕೃತಜ್ಞನಾಗಿದ್ದೇನೆ. ಈ ಕಥೆಗಳ ವಿಷಯದಲ್ಲಿ ಮೆಚ್ಚಿಕೆಯನ್ನು ಸೂಚಿಸಿರುವ ಹಲವು ಮಹನೀಯರಿಗೂ ನನ್ನ ಕೃತಜ್ಞತೆಯು ಸಲ್ಲಬೇಕಾಗಿದೆ.

ಈ ಕಥಾಸಂಕಲನವನ್ನು ಬಹಳ ಬೇಗ ತಮ್ಮ "ಓಂಕಾರ್ ಪ್ರೆಸ್" ಮುದ್ರಣಾಲಯದಲ್ಲಿ ಮುದ್ರಿಸಿಕೊಟ್ಟ ಶ್ರೀಮಾನ್ ಬಿ. ಎಸ್. ನಾರಾಯಣ ರಾಯರಿಗೆ ನನ್ನ ವಂದನೆಗಳನ್ನು ಸಮರ್ಪಿಸುತ್ತೇನೆ.

ಬೆಂಗಳೂರು
ತಾ॥ ೧-೫-೧೯೫೨

ಸಿ. ಕೆ. ವೆಂಕಟರಾಮಯ್ಯ

# ವಿಷಯಾನುಕ್ರಮಣಿಕೆ

# ಚಿತ್ರವಿಮರ್ಶೆ

"ನಾವು ನಮ್ಮ ಮನಸ್ಸಿನಲ್ಲಿರುವುದನ್ನು ಸ್ಪಷ್ಟವಾಗಿ ತಿಳಿಸಬೇಕೆಂದು ಅಪ್ಪಣೆಯಾಯಿತು. ನಮ್ಮ ಮೂವರ ಮನಸ್ಸಿನಲ್ಲಿರುವುದನ್ನೂ ತಿಳಿಸಿ ಬಿಡುತ್ತೇನೆ. ಅದು ಅಪರಾಧವಾದರೆ ಮನ್ನಿಸಬೇಕು. ತಾವು ಪಾರ್ಸಿ ಸ್ಥಾನದ ಚಿತ್ರಗಾರರನ್ನು ಕರೆಯಿಸಿರುವುದು ನಮ್ಮೆಲ್ಲರಿಗೂ ದೊಡ್ಡ ಅಪ ಮಾನವಾಗಿದೆ. ನಾವು ಸನ್ನಿಧಿಯ ಊಳಿಗಕ್ಕೆ ಅನರ್ಹರೆಂದು ಚಿತ್ತಕ್ಕೆ ಆಯಾಸವಾಗಿರಬೇಕೆಂಬ ಶಂಕೆಯುಂಟಾಗಿದೆ."

"ಆತನನ್ನು ಕರೆಯಿಸಿದ ಮಾತ್ರಕ್ಕೇ ನಿಮಗೆಲ್ಲಿಯ ಅಪಮಾನ? ನೀವು ಅನರ್ಹರೆ? ಅನರ್ಹರೆಂದವರಾರು?"

"ನಮ್ಮ ನಮ್ಮ ಶಿಷ್ಯರಿಗೆ ನಮ್ಮಲ್ಲಿ ಭಕ್ತಿಯೇ ಇಳಿದುಹೋಗಿದೆ. ನಮಗಿಂತ ಬಹಳ ಹೆಚ್ಚಿನ ಪ್ರೋತ್ಸಾಹವು ಆತನಿಗೆ ದೊರೆಯುತ್ತಿದೆ. ಆಸ್ಥಾನದಲ್ಲಿ ಮುಂದೆ ಅವರೇ ಪ್ರಬಲರಾಗಬಹುದೆಂಬ ಭಾವನೆಯಿಂದಲೋ ಏನೋ ಇದುವರೆಗೂ ನಮ್ಮಲ್ಲಿ ಗೌರವ ತೋರಿಸುತ್ತಿದ್ದವರೆಲ್ಲರೂ ನಮ್ಮನ್ನು ಅಲಕ್ಷ್ಯವಾಗಿ ಕಾಣುತ್ತಿದ್ದಾರೆ."

"ಅವರೆಲ್ಲರೂ ಹುಚ್ಚರು. ಸ್ವದೇಶವನ್ನು ಬಿಟ್ಟು ಇಷ್ಟು ದೂರ ಬಂದಿದ್ದಾರೆ ಆತ. ಅದಕ್ಕೆ ತಕ್ಕಂತೆ ಮತ್ತು ಅವರ ಯೋಗ್ಯತೆಗೆ ತಕ್ಕಂತೆ ಪ್ರೋತ್ಸಾಹ ಕೊಡದಿದ್ದರೆ, ಅವರು ಇಲ್ಲಿ ನಿಲ್ಲಬೇಕಲ್ಲಾ."

"ಇಲ್ಲಿ ನಾವೆಲ್ಲರೂ ಊಳಿಗಕ್ಕೆ ಸಿದ್ಧವಾಗಿದ್ದೂ ಹೊರದೇಶದಿಂದ ಆತನನ್ನು ಕರೆಯಿಸಬೇಕಾಯಿತೆ?"

"ಹಾಗೆ ನೋಡಿದರೆ ನಾನೂ ಹೊರದೇಶದವನೇ. ನಮ್ಮ ತಾತಂದಿರೂ ಅವರ ತಂದೆಯವರೂ ಹೊರಗಿನವರೇ ಅಲ್ಲವೆ? ನಾನೂ ಹೊರಗಿ

ನವನೆನ್ನಲು ಅಡ್ಡಿಯೇನು ? ಹಾಗೆ ಹೇಳಿದರೆ ನಾನೇನು ಮಾಡ ಬೇಕು ?"

"ಸನ್ನಿಧಿಗೆ ಕೋಪ ಬಂದಿರಬೇಕು. ನಾನು ಅಪರಾಧ ಮಾಡಿದ್ದರೆ ಮನ್ನಿಸಬೇಕು. ಸ್ಪಷ್ಟವಾಗಿ ತಿಳಿಸಬೇಕೆಂದು ಅಪ್ಪಣೆಯಾಯಿತು. ನಮ್ಮ ಮನಸ್ಸಿನಲ್ಲಿರುವುದನ್ನು ಮುಚ್ಚುಮರೆಯಿಲ್ಲದೆ ಅರಿಕೆಮಾಡಿದೆ."

ಚಿತ್ರಗಾರ ಅಬುಲ್ ಹಸನ್ ಆಡಿದ ಮಾತುಗಳನ್ನು ಕೇಳಿ ಜಹಾಂಗೀರನು ನಕ್ಕನು. ಆ ವೇಳೆಗೆ ಸರಿಯಾಗಿ ಅರಮನೆಯ ಊಳಿಗ ದವರು ಪದ್ಧತಿಯಂತೆ ಪನ್ನೀರುಗುಲಾಬಿ ಹೂಗಳ ಮಾಲೆಗಳನ್ನೂ, ವೀಳೆಯವನ್ನೂ ಮೂವರು ಚಿತ್ರಗಾರರಿಗೂ ಕೊಟ್ಟು ಹೊರಟುಹೋದರು. ಗುಲಾಬಿಯ ಹೂಗಳ ಪರಿಮಳವು ಮೊಗಲ್ ಸಮ್ರಾಟನ ಅಂತಃಪುರವನ್ನೆಲ್ಲ ವ್ಯಾಪಿಸಿತು. ಸಮ್ರಾಟನು ಮುಗುಳುನಗೆಯಿಂದ "ಅಬುಲ್ ಹಸನ್! ಹೂಗಳ ವಾಸನೆ ಚೆನ್ನಾಗಿದೆ; ಅಲ್ಲವೆ ?" ಎಂದು ಕೇಳಿದನು.

"ಸೊಗಸಾಗಿದೆ. ಜಹಾಪನಾ! ತಮ್ಮ ಕೀರ್ತಿಯಂತೆಯೇ ಈ ಹೂಗಳ ವಾಸನೆಯೂ ಇದೆ. ನ್ಯಾಯವಿಮರ್ಶೆಯಲ್ಲಿ ತಮ್ಮ ಸಮಾನರಿಲ್ಲ. ಕತ್ತೆಗೂ ಕೂಡ ನ್ಯಾಯ ಮಾಡಿದವರು, ತಾವು. ಅನ್ಯಾಯವಾದವರೆಲ್ಲರೂ ನ್ಯಾಯ ವನ್ನು ಪಡೆದು ಆನಂದಿಸುತ್ತಾರೆ. ತಮ್ಮ ಕೀರ್ತಿಯು ಮಾಸಬಾರದೆಂಬುದೇ ನಮ್ಮ ಆಶೆ."

"ಅಬುಲ್ ಹಸನ್! ಗುಲಾಬಿ ಹೂಗಳು ನಿಮಗೆ ಇಷ್ಟವೇನು ?"

"ಗುಲಾಬಿ ಹೂಗಳಲ್ಲಿ ನನಗೆ ಪ್ರಾಣ. ಪನ್ನೀರು ಗುಲಾಬಿ ಹೂಗಳಂತೂ, ನನ್ನ ಪ್ರಾಣದ ಪ್ರಾಣ. ಇವುಗಳ ಬಣ್ಣವನ್ನು ಹೆಚ್ಚಾಗಿ ಹೊಗಳಬೇಕೋ ಅಥವಾ ಇವುಗಳ ವಾಸನೆಯನ್ನು ಹೆಚ್ಚಾಗಿ ಹೊಗಳ ಬೇಕೋ ತಿಳಿಯದು."

"ನಿಮಗೂ ಗುಲಾಬಿ ಹೂಗಳು ಇಷ್ಟವೇನು ?"

ಚಿತ್ರಗಾರ ಮನೋಹರ ಮತ್ತು ಚಿತ್ರಗಾರ ಗೋವರ್ಧನ ಅವರಿಬ್ಬರೂ ಜಹಾಂಗೀರನ ಪ್ರಶ್ನೆಗೆ ಉತ್ತರವಾಗಿ ತಮಗೆ ಇಷ್ಟವೆಂಬುದನ್ನು ಸೂಚಿಸಿ ತಲೆದೂಗಿದರು. ಚಿತ್ರಗಾರ ಗೋವರ್ಧನನು "ಜಹಾಪನಾ! ಗುಲಾಬಿ

ಹೂಗಳೂ, ಬೆಳದಿಂಗಳೂ, ಇಷ್ಟವಿಲ್ಲದವರೂ ಉಂಟೆ ?" ಎಂದು ಉತ್ತರ ಹೇಳಿದನು. ಜಹಾಂಗೀರನ ಮುಖದ ಮೇಲೆ ತಿಳಿನಗೆಯೊಂದು ಲಾಸ್ಯವಾಡಿ ಮರೆಯಾಯಿತು. ಅವನು ಒಂದೆರಡು ಕ್ಷಣಗಳ ಕಾಲ ಸುಮ್ಮನಿದ್ದು "ಸಂತೋಷ. ಗೋವರ್ಧನ್! ನೀವು ಶ್ರೇಷ್ಠ ಚಿತ್ರಗಾರರು ಮಾತ್ರವೇ ಅಲ್ಲ. ರಸಿಕರಾದ ಕವಿಗಳೂ ಆಗಿದ್ದೀರಿ. ಗುಲಾಬಿ ಹೂಗಳ ಸೊಗಸನ್ನು ಹೇಳುವುದರಲ್ಲಿ ಬೆಳದಿಂಗಳನ್ನೂ ಸೂಚಿಸಿದ್ದೀರಿ. ಕಾಶ್ಮೀರದಲ್ಲಿ ಅವೆರಡರ ಸೊಂಪನ್ನೂ ಅನುಭವಿಸಬೇಕು. ಅಲ್ಲಿರುವ ನಮ್ಮ ಚಮಾಲಿನಲ್ಲಿ ಅಮೃತ ಶಿಲೆಯ ಮಂಟಪದಲ್ಲಿ ಹುಣ್ಣಿಮೆಯ ರಾತ್ರಿ ನಿಂತು, ಸುತ್ತಲೂ ಇರುವ ಗುಲಾಬಿ ಗಿಡಗಳ ಸೊಂಪನ್ನು ನೋಡಬೇಕು. ಹೂಗಳೆಲ್ಲ ನಗುತ್ತಿರುವಂತೆ ಇರುತ್ತವೆ. ಅಲ್ಲಿ ನಿಂತರೆ ಊಟವೂ ಬೇಡ; ನಿದ್ರೆಯೂ ಬೇಡ. ನಾನು ಮುಂದಿನ ಸಾರಿ ಕಾಶ್ಮೀರಕ್ಕೆ ಹೋದಾಗ ನೀವೆಲ್ಲರೂ ಬನ್ನಿ" ಎಂದನು. ಮೂವರು ಚಿತ್ರಗಾರರೂ ಉಚಿತ ರೀತಿಯಲ್ಲಿ ತಮ್ಮ ಕೃತಜ್ಞತೆಯನ್ನು ಸೂಚಿಸಿದರು. ಅಬುಲ್ ಹಸನ್, "ಇಲ್ಲಿನ ಗುಲಾಬಿಯೇ ಇಷ್ಟು ಸೊಗಸಾಗಿದೆ. ಕಾಶ್ಮೀರದ ಖಾಸಾ ಚಮಾಲಿನಲ್ಲಿ ಅದೆಷ್ಟು ಸೊಗಸಾಗಿ ಇದೆಯೋ! ನಮ್ಮನ್ನು ಕರೆದುಕೊಂಡು ಹೋಗುವುದಾಗಿ ಹೇಳಿ ಸನ್ನಿಧಿಯು ಪರಮಾನುಗ್ರಹಮಾಡಿದಂತಾಯಿತು. ಅಲ್ಲಿಗೆ ಹೋಗಿ ಗುಲಾಬಿಯ ಸೊಗಸಿನ ಪೂರ್ಣ ರೂಪವನ್ನು ಕಾಣುವುದೆಂದಿಗೋ—ಎಂದು ಆಶೆ" ಎಂದನು. ಜಹಾಂಗೀರನು ನಕ್ಕು "ಕಾಶ್ಮೀರಕ್ಕೆ ಬಂದು ಗುಲಾಬಿಯ ಸೊಗಸನ್ನು ಕಾಣಲು ಅಷ್ಟು ಆಶೆಯೆ ?" ಎಂದು ಕೇಳಿದನು.

"ಹೌದು, ಜಹಾಪನಾ! ಆಶೆ, ಬಹಳ ಆಶೆ. ಸ್ವರ್ಗದ ಹೂವು, ಇದು."

"ನೀವೇ ಹೇಳಿ. ಗುಲಾಬಿ ಗಿಡವು ಪಾರ್ಸಿಸ್ಥಾನದಿಂದ ಬಂದು ಇಲ್ಲಿ ನೆಲೆಸಿತು ದಿಳ್ಳಿಯಿಂದ ಕಾಶ್ಮೀರದವರೆಗೆ ವ್ಯಾಪಿಸಿತು. ಗುಲಾಬಿಯಲ್ಲಿ ನಿಮಗೆಲ್ಲ ಎಷ್ಟು ಪ್ರೀತಿ! ನೀವು ಗುಲಾಬಿಯನ್ನು ಪ್ರೀತಿಸಿದ ಮಾತ್ರಕ್ಕೇ ಮಲ್ಲಿಗೆಯಲ್ಲಿ ಅಥವಾ ಚಂಪಕದಲ್ಲಿ ಅಥವಾ ಜಾಜಿ ಹೂವಿನಲ್ಲಿ ಅನಾದರ ತೋರಿಸಿದಂತೆ ಅಥವಾ ಕೀಳಾಗಿ ಕಂಡಂತೆ ಆಯಿತೆ? ಚಿತ್ರಕಲೆಯ

ಗುಲಾಬಿ ಗಿಡವೂ ಅಷ್ಟೆ. ಅದು ಪಾರ್ಸಿಸ್ಥಾನದ ಉದ್ಯಾನದಿಂದ ಬಂದು ಭರತಖಂಡದ ಭೂಮಿಯಲ್ಲಿ ಬೆಳೆಯಕೂಡದೆ ?''

“ಮನ್ನಿಸಬೇಕು. ಜಹಾಪನಾ! ಈ ಸಾಮ್ಯವು ಪೂರ್ತಿಯಾಗಿ ಸರಿಹೋಗುವುದಿಲ್ಲ. ಹೊರದೇಶದ ಗುಲಾಬಿ ಗಿಡಗಳು ಆವರಿಸಿ ಅವುಗಳ ಮುಳ್ಳುಗಳಿಂದ ಇಲ್ಲಿಯ ಮಲ್ಲಿಗೆಗೂ ಇಲ್ಲಿಯ ಜಾಜಿಗೂ ಹಿಂಸೆಯಾಗ ಬಾರದು.”

“ನಮ್ಮ ದಿಳ್ಳಿಗೆ ಒಂದೇ ಕಡೆಯಿಂದ ಒಂದೇ ಮಾರ್ಗವಿದ್ದರೇ ಸರಿಯೆನ್ನಬೇಕೇ? ಹಲವು ಮಾರ್ಗಗಳು ಬಂದು ದಿಳ್ಳಿಗೆ ಸೇರಿ ದಿಳ್ಳಿಯನ್ನು ದೊಡ್ಡದು ಮಾಡಿವೆ. ನಮ್ಮ ಸಾಮ್ರಾಜ್ಯವೇ ಒಂದು ಉದ್ಯಾನವಾಗ ಬೇಕೆಂದು ನನ್ನ ಆಶೆ. ಅಲ್ಲಿ ಎಲ್ಲ ಗಿಡಗಳೂ ಸೊಂಪಾಗಿ ಬೆಳೆದು ಹೂ ಬಿಡಬೇಕೆಂಬುದು ನನ್ನ ಆಕಾಂಕ್ಷೆ. ಅರಮನೆಯ ಚಿತ್ರಶಾಲೆಯಲ್ಲಿ ಯೂರೋಪಿನ ಚಿತ್ರಗಳೂ ಇವೆ; ಸರ್ ಥಾಮಸ್‌ರೋ ಉತ್ತಮವಾದ ಅನೇಕ ಚಿತ್ರಗಳನ್ನೂ, ಇತರ ಅನೇಕ ಶ್ರೇಷ್ಠ ವಸ್ತುಗಳನ್ನೂ ತಂದು ಕೊಟ್ಟಿದ್ದಾರೆ. ಅವುಗಳನ್ನು ನಾನು ನೋಡಿ ಸಂತೋಷಿಸಿದ್ದೇನೆ. ಪೋರ್ಚುಗೀಸ್ ಪಾದ್ರಿಗಳೂ ಯೂರೋಪಿನ ಅನೇಕ ಚಿತ್ರಪಟಗಳನ್ನು ತಂದುಕೊಟ್ಟಿದ್ದಾರೆ. ನಾನು ಕೆಲವು ಚಿತ್ರಗಳನ್ನು ನೋಡುವುದಕ್ಕಾಗಿ ಅವರ ಚರ್ಚುಗಳಿಗೂ ಹೋಗಿಬಂದಿದ್ದೇನೆ. ಆದಮಾತ್ರಕ್ಕೇ ಇಸ್ಲಾಂ ಮತಕ್ಕೆ ಅಥವಾ ಹಿಂದೂ ಮತಕ್ಕೆ ನಾನು ಅಗೌರವ ತೋರಿಸಿದಂತಾಯಿತೆ? ಯೂರೋಪಿನ ಚಿತ್ರಗಳನ್ನು ಹೊಗಳಿದ ಮಾತ್ರಕ್ಕೇ ಪಾರ್ಸಿಸ್ಥಾನದ ಚಿತ್ರ ಗಾರರಿಗಾಗಲಿ ಇಲ್ಲಿಯ ಚಿತ್ರಗಾರರಿಗಾಗಲಿ ಅಗೌರವ ತೋರಿಸಿ ಅವರನ್ನು ಕೀಳಾಗಿ ಕಂಡಹಾಗಾಯಿತೆ? ನಾನು ಎಲ್ಲಿಗೆ ಸಂಚಾರ ಹೊರಟರೂ ಶಿಲ್ಪಿಗಳನ್ನೂ ಚಿತ್ರಗಾರರನ್ನೂ ಕರೆದುಕೊಂಡು ಹೋಗಿ ಸನ್ಮಾನಿಸು ತ್ತಿಲ್ಲವೆ?”

“ಅದನ್ನು ನಾವಾಗಲೀ, ಇತರರಾಗಲೀ ಇಲ್ಲವೆಂದರೆ ಅಲ್ಲಾ ಮೆಚ್ಚ ಬಹುದೇ? ತಾವು ಹೀಗೆ ಮಾಡುತ್ತಿರುವುದು, ನಮ್ಮ ಭಾಗ್ಯ; ನಮ್ಮ

ಪುಣ್ಯ; ನಮ್ಮ ದುಃಖವೇನೆಂಬುದು ಸನ್ನಿಧಿಗೆ ಸ್ಪಷ್ಟವಾಗಿ ಗೊತ್ತಾಗು ವಂತೆ ನಾವು ತಿಳಿಸಿಲ್ಲವೆಂದು ತೋರುತ್ತದೆ.'

"ನಿಮ್ಮ ದುಃಖವೇನೆಂಬುದು ಸ್ಪಷ್ಟವಾಗಿ ಗೊತ್ತಾಗಿದೆ. ನನ್ನ ಮಾತನ್ನು ಪೂರ್ತಿಯಾಗಿ ಕೇಳಿ. ನಾನು ಸಂಚಾರ ಹೊರಟಾಗಲೆಲ್ಲ ಶಿಲ್ಪಿಗಳನ್ನೂ, ಚಿತ್ರಗಾರರನ್ನೂ ಕರೆದುಕೊಂಡು ಹೋಗುವುದಕ್ಕೆ ನನ್ನ ಸ್ವಾರ್ಥವೂ ಇದೆ. ಅದು ನಿಮ್ಮ ಭಾಗ್ಯವೂ ಅಲ್ಲ; ನಿಮ್ಮ ಪುಣ್ಯವೂ ಅಲ್ಲ; ಅದು ನನ್ನ ಸ್ವಾರ್ಥ. ನಮ್ಮ ಅರಮನೆಯ ಚಿತ್ರಶಾಲೆಯು ಪ್ರಪಂಚದಲ್ಲೇ ಶ್ರೇಷ್ಠವೆನಿಸಬೇಕೆಂಬುದೂ, ಅದನ್ನು ನೋಡಿದವರೆಲ್ಲರೂ ಬೆರಗಾಗ ಬೇಕೆಂಬುದೂ, ನನ್ನ ಆಶೆ. ಈ ಸರ್ ಥಾಮಸ್‌ರೋ ಬಹಳ ಬಹಳ ಹೊಗಳುವ ಎಲಿಜಬೆತ್ ರಾಣಿಯವರೂ, ಪೋರ್ಚುಗೀಸರು ಕೊಂಡಾಡುವ ರಾಜರೂ ಇಲ್ಲಿಗೆ ಬಂದು ನೋಡಿ ನಮ್ಮ ಚಿತ್ರಶಾಲೆಗೂ, ಚಿತ್ರಗಾರರಿಗೂ ಸಲಾಂ ಹೊಡೆದು ಹೊರಟುಹೋಗುವಂತೆ ಮಾಡಬೇಕೆಂಬುದು ನನ್ನ ಅಭಿಲಾಷೆ. ಅದಕ್ಕಾಗಿ ನಮ್ಮ ಶಿಲ್ಪಿಗಳನ್ನೂ ಚಿತ್ರಗಾರರನ್ನೂ ಜೊತೆಯಲ್ಲಿ ಕರೆದುಕೊಂಡುಹೋಗಿ ನಮ್ಮ ದೇಶದ ವನಸಿರಿಯನ್ನೂ, ನಮ್ಮ ದೇಶದ ಪ್ರಾಣಿಗಳ ಮತ್ತು ಜನಗಳ ಸೌಂದರ್ಯವನ್ನೂ ಅವರಿಗೆ ಪ್ರತ್ಯಕ್ಷವಾಗಿ ತೋರಿಸಿ, ಅವರ ಪ್ರತಿಭೆಗೆ ಮೆರುಗು ಬರುವಂತೆ ಮಾಡುತ್ತಿರುವುದು. ನಮ್ಮ ದೇಶವೇ ಪ್ರಕೃತಿಯ ಸಿರಿಬೀಡು. ಅವನ್ನು ನೋಡಿ ಬಂದಮೇಲೆ ಚಿತ್ರಗಾರರ ಮನಸ್ಸು ಕುದುರುವ ಬಗೆಯೇ ಬೇರೆ. ನಮ್ಮ ದೇಶವೇ ಕಲಾ ಭಂಡಾರವಾಗಬೇಕು. ಬಸಾವಲ್‌ನಲ್ಲಿ ಬೀಡಾರ ಮಾಡಿದ್ದಾಗ ನದಿಯ ಪಾತ್ರದಲ್ಲಿ ಸೊಗಸಾದ ಬಿಳಿಯ ಶಿಲೆಯ ಬಂಡೆಯನ್ನು ಕಂಡೆ. ಅದನ್ನು ಸೊಗಸಾದ ಆನೆಯಾಗಿ ಮಾರ್ಪಡಿಸಬೇಕೆಂದೆ. ನಮ್ಮ ಶಿಲ್ಪಿಗಳ ಕೈವಾಡವೇ ಕೈವಾಡ. ಹಿಂದೂಗಳು ಸ್ವರ್ಗಲೋಕದ ಬಿಳಿಯ ಆನೆಗಳನ್ನು ಪುರಾಣದಲ್ಲಿ ವರ್ಣಿಸಿದ್ದಾರಂತಲ್ಲಾ! ನಮ್ಮ ಶಿಲ್ಪಿಗಳು ಆ ಬಿಳಿಯ ಆನೆಗಳಲ್ಲೊಂದನ್ನು ಭೂಲೋಕಕ್ಕೆ ತಂದು ನಿಲ್ಲಿಸಿಬಿಟ್ಟಂತೆ ಬಂಡೆಯನ್ನು ಬಿಡಿಸಿಬಿಟ್ಟರು. ಯಾವ ದೇಶದ ಆನೆಗಳು ತಾನೆ ನಮ್ಮ ದೇಶದ ಆನೆಗಳಷ್ಟು ಸುಂದರ ವಾಗಿವೆ? ಬಸಾವಲ್ ಸುತ್ತಿನ ಪ್ರದೇಶದಲ್ಲಿ, ಇನ್ನೆಲ್ಲೂ ಇಲ್ಲದ ಒಂದು

ಜಾತಿಯ ಜಿಂಕೆಗಳಿದ್ದುವು. ಹಿಂದುಗಳೂ ಮತ್ತು ಮುಸಲ್ಮಾನರೂ ಆ ಸಾಧುಪ್ರಾಣಿಗಳಾದ ಜಿಂಕೆಗಳನ್ನು ಹೊಡೆದು ಹೊಡೆದು ತಿಂದುಬಿಡು ತ್ತಿದ್ದರು. ಬಡವರು ಬಾಣಗಳಿಂದಲೂ, ಬಲ್ಲಿದರು ಬಂದೂಕಗಳಿಂದಲೂ ಅವುಗಳನ್ನು ಕೊಲ್ಲಲು ಮೊದಲುಮಾಡಿದರು. ಸುಂದರವಾದ ಆ ಜಾತಿಯ ಜಿಂಕೆಗಳೇ ನಿರ್ನಾಮವಾಗಬಹುದೆಂದು ತೋರಿತು. ಜಿಂಕೆಗಳೇ ಸುಂದರ. ಆ ಜಾತಿಯ ಜಿಂಕೆಗಳಂತೂ, ಇನ್ನೂ ಸುಂದರ. ಅವು ಇಲ್ಲದ ಹಾಗಾದರೆ ಕಾನನದ ಸೌಂದರ್ಯವೇ ಇಲ್ಲದಂತಾಗುತ್ತದೆಂದು ಭಾವಿಸಿದೆ. ಅದೇ ದಿನ ಒಂದು ಜಿಂಕೆಯನ್ನು ಕೊಂದು ನನ್ನದು ತನ್ನದೆಂದು ಹೋರಾಡುತ್ತಿದ್ದ ಒಬ್ಬ ಮುಸಲ್ಮಾನನನ್ನೂ ಮತ್ತು ಒಬ್ಬ ಹಿಂದೂವನ್ನೂ ಗದರಿಸಿದೆ. ಆ ಜಿಂಕೆಯನ್ನು ಅವರಲ್ಲಾರೇ ಹೊಡೆದಿದ್ದರೂ ಅದು ಅವರಿಬ್ಬರಿಗೂ ಸೇರಿದುದಲ್ಲವೆಂದೂ, ಅದು ನನಗೇ ಸೇರಿದುದೆಂದೂ ಹೇಳಿದೆ. ಆ ಜಿಂಕೆಗೊಂದು ಗೋರಿಯನ್ನು ಕಟ್ಟಿಸಿದೆ. ಆ ಗೋರಿಯ ಬಳಿ ಸೊಗಸಾದ ಕಲ್ಲಿನ ಜಿಂಕೆಯನ್ನು ಮಾಡಿಸಿಟ್ಟೆ. ಆ ಕಾಡಿನ ಜಿಂಕೆಗಳನ್ನಾರೂ ಬೇಟೆ ಯಾಡಕೂಡದೆಂದೂ, ಅವುಗಳನ್ನು ಬೇಟೆಯಾಡಿದವರು ಕ್ರೂರ ಶಿಕ್ಷೆಗೆ ಗುರಿಯಾಗಬೇಕಾಗುವುದೆಂದೂ ಕಟ್ಟಪ್ಪಣೆ ಮಾಡಿದೆ........"

ಹೆಂಗರುಳಿನವನಾದ ಚಿತ್ರಗಾರ ಗೋವರ್ಧನನು ತಾನು ಸಮ್ರಾಟನ ಸನ್ನಿಧಿಯಲ್ಲಿರುವುದನ್ನೂ ಆ ಕ್ಷಣದಲ್ಲಿ ಮರೆತು, ಕಂಬನಿ ಸುರಿಸುತ್ತಾ "ಸುಖವಾಗಿ ನೂರು ವರ್ಷ ಕಾಲ ಬಾಳುವಂತೆ ಭಗವಂತ ನಿಮಗೆ ಅನುಗ್ರಹಿಸಲಿ, ನಮ್ಮಪ್ಪಾ!" ಎಂದು ಗದ್ಗದ ಧ್ವನಿಯಲ್ಲಿ ಹೇಳಿ ಮೇಲಕ್ಕೆದ್ದು ಸಲಾಂ ಮಾಡಿದನು. ಅಬುಲ್‌ಹಸನ್ ಒಡನೆಯೇ ತಾನೂ ಎದ್ದು ಸಲಾಂ ಮಾಡಿ "ಖಾವಿಂದ್! ಕ್ಷುದ್ರ ಪ್ರಾಣಿಗಳಲ್ಲಿ ಕೂಡ ಇಷ್ಟು ದಯೆ ತೋರಿಸಿದ್ದೀರಿ. ಈ ಚಿತ್ರಗಾರ ಬಡಪ್ರಾಣಿಗಳಲ್ಲಿ ದಯೆ ತೋರ ಬಾರದೆ! ಹೊರಗಿನವರೆದುರಿಗೆ ಅಪಮಾನ ಮಾಡದೆ ಇದುವರೆಗಿನಂತೆಯೇ ಕಾಪಾಡಿ, ಹುಜೂರ್" ಎಂದನು. ಮನೋಹರನು, "ನನ್ನ ಪ್ರಾರ್ಥನೆಯೂ ಅದೇ, ಹುಜೂರ್" ಎಂದು ದನಿಗೂಡಿಸಿದನು. ಜಹಾಂಗೀರನು ನಕ್ಕು "ಅಸಮಾಧಾನದ ತೆರೆಯು ಬಿದ್ದರೆ ಬುದ್ಧಿಯೇ

ಮರೆಯಾಗುತ್ತದೋ ಏನೋ! ಮೇಲೆ ತಲೆಯೆತ್ತಿ ನೋಡಿ! ಊದಾ ಬಣ್ಣದ ಮಕಮಲಿನ ಮೇಲುಕಟ್ಟಿನಿಂದ ಅಲ್ಲಲ್ಲಿ ಅಪರಂಜಿಯ ಹಣ್ಣುಗಳು ತೂಗಾಡುತ್ತಿವೆ. ನಮ್ಮ ದೇಶದವರು ಮಾಡಿರುವ ಆ ಅಪರಂಜಿಯ ಹಣ್ಣುಗಳಿಗೆ ಪರದೇಶದ ಮಕಮಲಿನಿಂದ ಅವಮಾನವೆ? ನಾನು ಪಚ್ಚೆಯ ಬಟ್ಟಲಿನಲ್ಲಿ ಷರಬತ್ತು ಕುಡಿಯುತ್ತೇನೆ. ಕೆಂಪಿನ ಒಟ್ಟಲಿನಲ್ಲಿ ಷರಬತ್ತನ್ನು ಕುಡಿಯುತ್ತೇನೆ. ಪಚ್ಚೆಯ ಬಟ್ಟಲು ಪಾರ್ಸಿಸ್ಥಾನದಿಂದ ಬಂದ ಬಟ್ಟಲು; ಕೆಂಪಿನ ಬಟ್ಟಲು ನಮ್ಮ ದೇಶದ ಬಟ್ಟಲು; ಎರಡು ಬಟ್ಟಲುಗಳೂ ಒಟ್ಟಿಗಿರುತ್ತವೆ. ಇದರಿಂದ ನಮ್ಮ ದೇಶದ ಕಲಾವಿದರಿಗೆ ಅವಮಾನ ಮಾಡಿದಂತಾಯಿತೆ? ಇಲ್ಲಿ ಹಾಸಿರುವುದು ಇಸ್ಪಹಾನಿನ ರತ್ನಕಂಬಳಿ; ಈ ಅರಮನೆಯ ಗೋಡೆಯ ಅಮೃತಶಿಲೆಯ ಪಟ್ಟಿಕೆಗಳನ್ನು ಕೊರೆದವರು ನಮ್ಮ ದೇಶದ ಶಿಲ್ಪಿಗಳು. ಇಸ್ಪಹಾನಿನ ರತ್ನಕಂಬಳಿಯನ್ನು ಇಲ್ಲಿ ಹಾಸಿರುವುದರಿಂದ ಆ ಶಿಲ್ಪಿಗಳಿಗೆ ಅವಮಾನ ಮಾಡಿದಂತಾಯಿತೆ? ಎಲ್ಲಿ ಗುಣವಿದ್ದರೂ ಪ್ರೋತ್ಸಾಹಿಸಬೇಕಲ್ಲವೆ? ಅದು ತಪ್ಪೆ? ಪಾರ್ಸಿಸ್ಥಾನದ ಚಿತ್ರಗಾರರು ಬರೆದಿರುವ ಸಾಧುವಿನ ಚಿತ್ರವೆಷ್ಟು ರಮಣೀಯವಾಗಿದೆ! ಸರೋವರವನ್ನೂ, ಆಶ್ರಮವನ್ನೂ, ಬೆಟ್ಟಗುಡ್ಡಗಳನ್ನೂ, ಸಮೀಪದಲ್ಲಿ ಮೇಯುತ್ತಿರುವ ಮೇಕೆಗಳನ್ನೂ ಅವರೆಷ್ಟು ಚೆನ್ನಾಗಿ ಚಿತ್ರಿಸಿದ್ದಾರೆ! ಆ ಚಿತ್ರಪಟದಲ್ಲಿ ಸಾಧುವಿನ ಬಳಿಯಲ್ಲಿ ಏನನ್ನೋ ಬೇಡುತ್ತಿರುವ ಮನುಷ್ಯನ ಚಿತ್ರವಿದೆ. ಅವನು ಹೆಗಲಿನ ಮೇಲೆ ಆಡಿನ ಚರ್ಮವನ್ನು ಹಾಕಿಕೊಂಡಿದ್ದಾನೆ. ಅದರ ಕೂದಲುಗಳನ್ನು ಕೂಡ ಅಷ್ಟು ಚಿಕ್ಕ ಚಿತ್ರದಲ್ಲಿ ಬಿಡಿಸಿದ್ದಾರೆ, ಪಾರ್ಸಿಸ್ಥಾನದ ಚಿತ್ರಕಾರರು. ಸಾಧುವಿನ ಮುಖಭಾವವಂತೂ, ಸಾವಿರ ಸಲ ನೋಡಿದರೂ ಹೊಸದೇ. ಸಾಧುವಿನ ಬಳಿಯಲ್ಲಿರುವ ಚಿರತೆಯನ್ನು ನೋಡಿದರಂತೂ, ಅದು ಉಸಿರಾಡುತ್ತಿರುವಂತಿದೆ. ಚಿತ್ರವೇ ಬಹಳ ಚಿಕ್ಕದು. ಅದರಲ್ಲಿರುವ ಸರೋವರವು ತೀರ ಸ್ವಲ್ಪ ಸ್ಥಳವನ್ನು ಆಕ್ರಮಿಸಿದೆ. ಹಾಗಿದ್ದೂ, ಅದರ ಸೋಪಾನ, ನೀರಿನ ಅಲೆಗಳ ಮಧ್ಯದಲ್ಲಿ ಕಾಣುತ್ತಿರುವ ಸುತ್ತಮುತ್ತಲಿನ ವಸ್ತುಗಳ ಪ್ರತಿಬಿಂಬಗಳು—ಇವೆಲ್ಲಾ ನಿಜತ್ವ ಭ್ರಾಂತಿಯುಂಟಾಗುವಂತೆ ಚಿತ್ರಿತವಾಗಿವೆ. ಬಗೆಬಗೆಯ ಗಿಡ

ಮರಗಳನ್ನೂ ಪಚ್ಚೆಯ ಹಾಸಿನಂತಿರುವ ಹಸಿರು ಹುಲ್ಲನ್ನೂ ಚಿತ್ರಿಸು ವುದರಲ್ಲಿ ಎಷ್ಟು ಬಗೆಗಳ ಹಸಿರು ಬಣ್ಣಗಳನ್ನು ಎಷ್ಟು ರಮ್ಯವಾಗಿ ಉಪಯೋಗಿಸಿದ್ದಾರೆಂಬುದನ್ನು ನೋಡಿದರೇ, ಚಿತ್ರಕಾರರ ಸಾಮರ್ಥ್ಯವು ವ್ಯಕ್ತವಾಗುತ್ತದೆ. ಇಷ್ಟು ವಸ್ತುಗಳೂ ಇರುವುದನ್ನು ಪ್ರಕೃತಿಯಲ್ಲಿ ಕಂಡರೆ ಅವು ದೂರದ ವಿಷಯದಲ್ಲಿ ಮತ್ತು ಸೌಂದರ್ಯದ ವಿಷಯದಲ್ಲಿ ಹೇಗೆ ಹೇಗಿರಬಹುದೋ ಹಾಗೆಹಾಗೆಯೇ ಪಾರ್ಸಿಸ್ಥಾನದ ಚಿತ್ರಗಾರರು ಚಿತ್ರಿ ಸಿದ್ದಾರೆ. ಹೀಗಿದ್ದರೂ ಆ ಚಿತ್ರಪಟದ ಅಗಲ ಎರಡೇ ಅಂಗುಲಗಳು; ಉದ್ದವು ನಾಲ್ಕೇ ಅಂಗುಲಗಳು'' ಎಂದನು. ಒಡನೆಯೇ ಅಬುಲ್‌ಹಸನ್ ''ಹುಜೂರ್! ತಾವು ಮೊಗಲ್ ಸಾಮ್ರಾಜ್ಯ ಷಾಹಿ ಸಿಂಹಾಸನವನ್ನೇರಿದ ಶುಭದಿನದ ದೃಶ್ಯವನ್ನು 'ಜಹಾಂಗೀರ್ ನಾಮಾ' ಗ್ರಂಥದ ಮುಖಚಿತ್ರವಾಗಿ ಸೇರಿಸಲು ನಾನು ಬರೆದುಕೊಟ್ಟ ಚಿತ್ರವು ಇನ್ನೂ ಅಗಲವಾಗಿದ್ದು ಇನ್ನೂ ಉದ್ದವಾಗಿರುವುದು ತಮ್ಮ ಮನಸ್ಸಿನಲ್ಲಿರಬೇಕು'' ಎಂದನು. ಅವನು ಮಾತುಗಳನ್ನು ನಿಲ್ಲಿಸಿದ ಮರುಕ್ಷಣವೇ ಮನೋಹರನು ''ಸಮ್ರಾಟರು ನಾನು ಬರೆದ 'ಮೊಗಲ್ ರಾಜಕುಮಾರಿಯರು' ಎಂಬ ಹೆಸರಿನ ಚಿತ್ರದ ಮೇಲೆ ಆಕ್ಷೇಪಣೆ ಮಾಡಿರಬಹುದೇನೋ ಎಂದು ನನ್ನ ಮನಸ್ಸಿನ ಶಂಕೆ. ಹಾಗಿದ್ದರೆ ಮನ್ನಿಸಬೇಕು. ಅದು ಆರೂವರೆ ಅಂಗುಲ ಉದ್ದವಿದೆ; ಐದು ಅಂಗುಲ ಅಗಲವಿದೆ. ಅಪ್ಪಣೆಯಾದರೆ, ಎರಡೇ ಅಂಗುಲದಲ್ಲಿ ಮತ್ತು ನಾಲ್ಕೇ ಅಂಗುಲ ಉದ್ದದಲ್ಲಿ ಮತ್ತೆ ಬರೆದು ಒಪ್ಪಿಸುತ್ತೇನೆ. ಈ ಗುಲಾಮನಿಗೆ ಅದಕ್ಕೆ ಅವಕಾಶ ಕೊಟ್ಟು ಅನುಗ್ರಹಿಸಬೇಕು. ನಮ್ಮನ್ನು ಕೀಳಾಗಿ ಎಣಿಸಿ ಹೊರಗಿನವರಿಗೆ ಹೋಲಿಸಿ ಕೊರಳು ಕೊಯ್ಯಕೂಡದೆಂದು ಈ ದೀನ ಸೇವಕನು ಬೇಡುತ್ತಾನೆ'' ಎಂದನು. ಗೋವರ್ಧನನ ಸರದಿಯು ಆ ಬಳಿಕ. ಅವನು ''ನನ್ನ ಚಿತ್ರವನ್ನು ನೋಡಿ ಸಾಮ್ರಾಟರ ಮನಸ್ಸಿಗೆ ಕೊರೆಯೇ? ಹಾಗಿದ್ದಲ್ಲಿ ನಾವು ಬದುಕಿದ್ದೂ ವ್ಯರ್ಥ. ಅದು ಹದಿಮೂರು ಅಂಗುಲ ಉದ್ದವಿದೆ ಮತ್ತು ಎಂಟೂಕಾಲು ಅಂಗುಲ ಅಗಲವಿದೆ. ಹುಜೂರ್ ಅಪ್ಪಣೆಯಾದರೆ ನಾನೂ ಅದನ್ನು ಎರಡೇ ಅಂಗುಲ ಅಗಲದಲ್ಲಿ ಮತ್ತು ನಾಲ್ಕೇ ಅಂಗುಲ ಉದ್ದದಲ್ಲಿ ಬರೆದು ಸಮರ್ಪಿಸುತ್ತೇನೆ. ಆ ಬಳಿಕ

ನಮ್ಮೆಲ್ಲರ ಯೋಗ್ಯತಾ ಪರೀಕ್ಷೆ ನಡೆಯುಬಹುದು. ಹೀಗೆ ನಮ್ಮನ್ನು ಕೀಳೆಣಿಸುವುದು ಮಾತ್ರ ಬೇಡವೆಂದು ನಾನು ಬೇಡುತ್ತೇನೆ. ಮಹಾ ಸಮ್ರಾಟರಲ್ಲಿ ನಮಗೆ ನ್ಯಾಯ ದೊರೆತೇ ದೊರೆಯುವುದೆಂದು ನನ್ನ ಭರವಸೆ. ನಮ್ಮ ಮಾತುಗಳನ್ನು ಖಾವಂದರವರು ಇಷ್ಟು ತಾಳ್ಮೆಯಿಂದ ಸಹಿಸುತ್ತಿರುವುದೇ ಆ ಭರವಸೆಯನ್ನು ಇನ್ನೂ ಹೆಚ್ಚಿಸುತ್ತದೆ. ಸನ್ನಿಧಿಯಲ್ಲಿ ನಾನೆಂದೂ ಇಷ್ಟು ಮಾತನಾಡಿದವನಲ್ಲ. ಮೂಕಸಂಕಟವನ್ನು ಸಹಿಸ ಲಾರದೆ ಇಷ್ಟು ಹೆಚ್ಚಾಗಿ ಮಾತನಾಡಿದ್ದೇನೆ. ಅದಕ್ಕಾಗಿ ಕ್ಷಮೆಯನ್ನು ಬೇಡುತ್ತೇನೆ'' ಎಂದು ಹೇಳಿ ನಿಟ್ಟುಸಿರನ್ನು ಬಿಟ್ಟನು.

''ನನಗೂ ಅದೇ ಆಶ್ಚರ್ಯ; ಎಂದೂ ಹೆಚ್ಚಾಗಿ ಮಾತನಾಡದಿದ್ದವರು ತಪ್ಪು ತಿಳಿದುಕೊಂಡು ಈ ದಿನ ಇಷ್ಟು ಮಾತನಾಡಿದ್ದೀರೆಂತ. ಒಂದು ವಿಷಯಕ್ಕೆ ಸಂತೋಷವೂ ಹೌದು. ಹಿಂದುಗಳೂ ಮುಸಲ್ಮಾನರೂ ಎಲ್ಲದ ರಲ್ಲಿಯೂ ಒಕ್ಕಟ್ಟಾಗಿರುವಂತೆ ಮಾಡಬೇಕೆಂದು ನಮ್ಮ ತಂದೆಯವರು ಬಹಳ ಪ್ರಯತ್ನಮಾಡಿದರು. ಮತಧರ್ಮದಲ್ಲಿ ಕೂಡ ಅವರು ಒಂದಾಗ ಬೇಕೆಂಬ ಭಾವನೆಯಿಂದ ನಮ್ಮ ತಂದೆಯವರು ಒಂದು ಹೊಸ ಮತವನ್ನೇ ಸ್ಥಾಪನೆ ಮಾಡಬೇಕೆಂದೂ ಹೆಣಗಿದರು. ಅದು ಸಾಧ್ಯವಾಗಲಿಲ್ಲ. ನೀವು ಮೂವರೂ ನನ್ನ ವಿರೋಧದಲ್ಲಾದರೂ ಈಗ ಒಂದಾಗಿದ್ದೀರಿ. ಇದರಿಂದ ನನ್ನ ಮನಸ್ಸಿಗೆ ಸಂತೋಷ.''

''ರಾಮ, ರಾಮ. ತಮ್ಮಲ್ಲಿ ವಿರೋಧವೆಂದರೇನು? ನಾನು ಎಂದೂ ಹೆಚ್ಚು ಮಾತನಾಡದವನು ಈ ದಿನ ಹೆಚ್ಚು ಮಾತನಾಡುತ್ತಿದ್ದೇನೆ. ಎಲ್ಲದ ರಲ್ಲಿಯೂ ನಾವು ಮೂವರೂ ಒಕ್ಕಟ್ಟಾಗಿ ಅಣ್ಣತಮ್ಮಂದಿರಂತೆ ನಡೆಯು ತ್ತಿರುವುದು ತಮಗೆ ಗೊತ್ತೇ ಇದೆ. ಮತ್ತಾವುದೋ ಜನ್ಮದಲ್ಲಿ ಅಣ್ಣ ತಮ್ಮಂದಿರಾಗಿದ್ದು ಈಗ ಹೀಗೆ ಬೇರೆ ಬೇರೆ ಕುಟುಂಬಗಳಲ್ಲಿ ಹುಟ್ಟಿದ್ದೇ ವೆಂದೇ ಜನರು ಹೇಳುತ್ತಾರೆ. ನಾವು ಹಾಗೆಯೇ ಭಾವಿಸಿದ್ದೇವೆ. ಈಗ ಅಪಮಾನವೂ ಮೂವರಿಗೂ ಸಮಾನವಾಗಿ ದೊರೆತಿದೆ.''

''ಅದೇ ತಪ್ಪು ತಿಳಿವಳಿಕೆ. ನೀವು ಮೂವರೂ ಬರೆದಿರುವ ಆ ಪ್ರಸಿದ್ಧ ಚಿತ್ರಗಳು ಅರಮನೆಯ ಚಿತ್ರಶಾಲೆಗೇ ಭೂಷಣವಾಗಿವೆ. ಅವುಗಳಲ್ಲಿ

ಒಂದೊಂದು ಚಿತ್ರವೇ ಒಂದೊಂದು ಪ್ರಪಂಚ. ಅವು ಮೂರೂ ಮೂರು ಚಿತ್ರರತ್ನಗಳು. ಚಿತ್ರವಿಮರ್ಶಕರೆಲ್ಲ ಅವುಗಳನ್ನು ಕೊಂಡಾಡಿದ್ದಾರೆ. ಬಹುಶಃ ನಿಮಗೆ ತಿಳಿದಿಲ್ಲದ ಒಂದು ಸಂಗತಿಯನ್ನು ತಿಳಿಸುತ್ತೇನೆ, ಕೇಳಿ. ರಾಜ ಮಹಾರಾಜರುಗಳೆಲ್ಲಾ ಅವುಗಳನ್ನು ನೋಡಲು ಬಯಸುತ್ತಾರೆ. ಅವರಲ್ಲಿ ಸಮ್ರಾಟನನ್ನು ನೋಡಲು ಬರುವವರಿಗಿಂತ ಅವುಗಳನ್ನು ನೋಡಲು ಅರಮನೆಗೆ ಬರುವವರ ಸಂಖ್ಯೆ ಹೆಚ್ಚಾಗಿದೆ. ಮೊನ್ನೆ ಒಬ್ಬರು ಸಾಮಂತ ರಾಜರು ಅವುಗಳನ್ನು ನೋಡುತ್ತ ನಿಂತು ಮೈಮರೆತರು. ಹೊರಗಿನ ಜ್ಞಾನವೇ ಇಲ್ಲದೆಹೋಯಿತು. ಅದರ ಪರಿಣಾಮವಾಗಿ ನಾನು ಬಹಳ ಹೊತ್ತು ಕಾಯಬೇಕಾಯಿತು. ನನ್ನನ್ನು ನೋಡಲು ಬರಬೇಕಾಗಿದ್ದ ಹೊತ್ತು ಮೀರಿಹೋದುದರ ಪರಿವೆಯೂ ಅವರಿಗಿರಲಿಲ್ಲ. ತಡವಾಗಿ ಬಂದುದಕ್ಕಾಗಿ ಬೆಚ್ಚಿ ನನ್ನ ಕ್ಷಮಾಪಣೆಯನ್ನು ಬೇಡಿದರು. ನನಗೆ ನಿಮ್ಮನ್ನು ಕಂಡರೆ ಗೌರವವೋ ಕೀಳುಭಾವನೆಯೋ ನೀವೇ ಯೋಚಿಸಿ. ನನಗೂ ಸ್ವಲ್ಪಮಟ್ಟಿಗೆ ಚಿತ್ರವಿಮರ್ಶೆ ಗೊತ್ತು. ಅಂಗುಲಗಳ ಲೆಕ್ಕಾಚಾರದ ಮೇಲೆ ಚಿತ್ರವಿಮರ್ಶೆ ಮಾಡುವವರ ಗುಂಪಿಗೆ ನಾನೇನೂ ಸೇರಿಲ್ಲ. ಅಬುಲ್ ಹಸನ್! ನೀವು ಬರೆದ ಚಿತ್ರವನ್ನು ಮೆಚ್ಚಿ ನಿಮಗೆ 'ನಾದಿರುಜ್ಜಮಾನ್' ಎಂದು ಬಿರುದು ಕೊಟ್ಟ ದಿನ ನನಗಿದ್ದ ಪ್ರೀತಿ ಗೌರವಗಳೇ ಈಗಲೂ ಇವೆ. ಅಂದಿನಂತೆಯೇ ನೀವು ಈಗಲೂ ಅದ್ಭುತ ವ್ಯಕ್ತಿಯಾಗಿದ್ದೀರಿ. ಆ ಚಿತ್ರವೂ ಎಂದೆಂದಿಗೂ ಅದ್ಭುತವಾಗಿಯೇ ಇರುತ್ತದೆ. ಉಳಿದ ಎರಡು ಚಿತ್ರಗಳೂ ಅಷ್ಟೆ. ಮನೋಹರ್! ನಿಮ್ಮ 'ಮೊಗಲ್ ರಾಜಕುಮಾರಿಯರು' ಎಂಬ ಚಿತ್ರವನ್ನು ಕಂಡು ತಮ್ಮ ತಸ್ವೀರುಗಳನ್ನೂ ನೀವು ಬರೆಯಬಾರದೆ—ಎಂದು ರಾಜಕುಟುಂಬದವರೆಲ್ಲರೂ ಆಶೆಯಿಂದ ಆ ಸಂತೋಷ ಸಮಯವನ್ನು ನಿರೀಕ್ಷಿಸುತ್ತಿದ್ದಾರೆ. ಬೆಳದಿಂಗಳು ರಾತ್ರಿಯ ಚಂದ್ರಶಾಲೆಯ ದೃಶ್ಯವನ್ನೂ ಸುತ್ತಮುತ್ತಲಿನ ಪ್ರಕೃತಿ ಸಂಪತ್ತನ್ನೂ ನೀವು ಅತ್ಯಂತ ಮನೋಹರವಾಗಿ ಚಿತ್ರಿಸಿದ್ದೀರಿ. ಗೋವರ್ಧನ್! ನೀವು ಬರೆದಿರುವ ಚಿತ್ರವನ್ನು ಹದಿಮೂರು ಅಂಗುಲ ಉದ್ದದಿಂದ ನಾಲ್ಕು ಅಂಗುಲಗಳಿಗೆ ಇಳಿಸುವುದಾಗಿ ಹೇಳಿದಿರಿ. ಆ ಮಾತನ್ನು ಮಾತ್ರ ಇನ್ನೊಂದು ಸಾರಿ ಹೇಳಬೇಡಿ. ನೀವೇ ಇನ್ನೊಂದು

ಸಾರಿ ಅಂಥ ಚಿತ್ರವನ್ನು ಬರೆಯಲಾರಿರಿ. ಆ ಚಿತ್ರವನ್ನು ನೋಡಿದಾಗಲೆಲ್ಲ ನನಗೆ ಹಾಗೆ ತೋರುತ್ತದೆ. ಅದರಲ್ಲಿ ಬರೆದಿರುವ ನವಿಲೊಂದೇ ಸಾಕು. ಅದರಲ್ಲಿ ಚಿತ್ರಿಸಿರುವ ಅಜ್ಮೀರದ ಸಣ್ಣ ದರ್ಬಾರಿನಲ್ಲಿ ನಾನೂ ಸೇರಿ ನಲವತ್ತೊಂಬತ್ತು ಜನರಿದ್ದೆವು. ಪೂಜ್ಯರಾದ ಖ್ವಾಜಾ ಮುಯಿನುದ್ದೀನ್ ಚಿಷ್ಟಿಯವರ ಗೋರಿಯ ಬಳಿ ನಡೆದ ಆ ದರ್ಬಾರಿನಲ್ಲಿದ್ದವರೆಲ್ಲರ ವೈಶಿಷ್ಟ್ಯ ಗಳೂ ಕಣ್ಣಿಗೆ ಕಟ್ಟುವಂತೆ, ಅಂದಿನ ದೃಶ್ಯವೇ ಯಥಾವತ್ತಾಗಿ ಮನಸ್ಸಿನ ಎದುರಿಗೆ ಬರುವಂತೆ ಹದಿಮೂರು ಅಂಗುಲ ಉದ್ದ ಎಂಟೂಕಾಲು ಅಂಗುಲ ಅಗಲದ ಚಿತ್ರದಲ್ಲಿ ಬರೆಯುವುದು ಕುಂಚ ಹಿಡಿದವರಿಗೆಲ್ಲಾ ಸಾಧ್ಯವೆ? ನೀವು ಮೂವರೂ ನನ್ನ ಆಸ್ಥಾನದಲ್ಲಿರುವುದು ನನ್ನ ಪುಣ್ಯ; 'ಕಿಸ್ಮತ್' ಅನ್ನುವುದು ಇದಕ್ಕೇ; ಪಾರ್ಸಿಸ್ಥಾನದ ಚಿತ್ರಗಾರರೂ ಅದ್ಭುತವಾಗಿ ಚಿತ್ರ ಬರೆಯುತ್ತಾರೆ. ಅವರಂತೆಯೇ ನೀವೂ, ನಿಮ್ಮಂತೆಯೇ ಅವರೂ; ನಮ್ಮ ತಂದೆಯವರು ಪದೇ ಪದೇ ಹೇಳುತ್ತಿದ್ದರು, 'ಕಲಾವಿದರ ಜೀವನವು ಪವಿತ್ರವಾದ ಜೀವನ, ಸಾಮ್ರಾಜ್ಯದ ಘನತೆಗೆ ಮತ್ತು ದೇಶದ ಅಭ್ಯುದ ಯಕ್ಕೆ ಕಲಾವಿದರ ಆವಶ್ಯಕತೆ ಬಹಳ'—ಅಂತ. ನಾನೂ ಆ ಪೂಜ್ಯರ ಮೇಲ್ಪಂಕ್ತಿಯನ್ನೇ ಅನುಸರಿಸತಕ್ಕವನು. ನಿಮ್ಮ ತಪ್ಪು ಅಭಿಪ್ರಾಯವನ್ನು ಬಿಟ್ಟುಬಿಡಿ. ನಾನು ಈಗ ನಿಮಗೆ ಭೇಟಿ ಕೊಟ್ಟಿರುವುದು ನೂರ್ಜಹಾನ್ ಬೇಗಂ ಅಂತಃಪುರದಲ್ಲಿ. ನಿಮ್ಮಲ್ಲಿ ನನಗಿರುವ ಗೌರವವೆಷ್ಟೆಂಬುದಕ್ಕೆ ಇದೂ ಒಂದು ನಿದರ್ಶನ. ಸಾಮಾನ್ಯರಿಗೆ ಇಲ್ಲಿ ನನ್ನ ಭೇಟಿ ದೊರೆ ಯುವುದಿಲ್ಲ.''

ಸಮ್ರಾಟನ ಆ ಮಾತುಗಳನ್ನು ಕೇಳಿ ಮೂವರು ಚಿತ್ರಗಾರರೂ ತೃಪ್ತರಾಗಿ ತಮ್ಮ ಸಂತೋಷ ಕೃತಜ್ಞತೆಗಳನ್ನು ಸೂಚಿಸಿ ಆತನನ್ನು ಬೀಳ್ಕೊಂಡು ಮನೆಗಳಿಗೆ ಹಿಂತಿರುಗಿದರು. ಪಾರ್ಸಿಸ್ಥಾನದ ಚಿತ್ರಗಾರನು ಜಂಭಗಾರ. ಆದರಿಂದ ಅವರ ಮನಸ್ಸಿಗೆ ಖೇದವುಂಟಾಗಲು ಹಲವು ಕಾರಣಗಳೊದಗಿದ್ದುವು. ಅವನು ಹುಟ್ಟುಜಂಭಗಾರನಾಗಿದ್ದುದರಿಂದಲೋ, ಕಲಾಭಿಜ್ಞನಾದ ಜಹಾಂಗೀರನು ಅವನಿಗೆ ಅಮಿತವಾದ ಪ್ರೋತ್ಸಾಹವನ್ನು ಕೊಟ್ಟುದರಿಂದಲೋ ಅವನ ತಲೆಯು ಕೊಂಚ ತಿರುಗಿಹೋಯಿತು.

ಭಾರತೀಯ ಚಿತ್ರಗಾರರನ್ನು ತೆಗಳಿದಷ್ಟೂ ತನ್ನ ಸ್ಥಾನವು ಭದ್ರವಾಗ ಬಹುದೆಂಬ ಭಾವನೆಯೂ ಅವನಲ್ಲಿ ಬೇರೂರಿತು. ಸಮ್ರಾಟನ ಆಸ್ಥಾನಕ್ಕೆ ಪಾರ್ಸಿಸ್ಥಾನದಿಂದ ತನ್ನನ್ನು ಕರೆಯಿಸಿದ್ದುದೇ ಅಲ್ಲಿಯ ಇತರ ಚಿತ್ರಗಾರರಲ್ಲಿ ಹುರುಳಿಲ್ಲದಿದ್ದುದಕ್ಕೆ ಸಾಕ್ಷಿಯೆಂದೂ, ತನಗೆ ಅವರಲ್ಲಿ ಶ್ರೇಷ್ಠರೆನಿಸಿ ಕೊಂಡಿದ್ದವರಿಗಿಂತಲೂ ಬಹಳ ಹೆಚ್ಚಿನ ವೇತನವು ದೊರೆಯುತ್ತಿದ್ದುದೇ ತನ್ನ ಶಕ್ತಿಸಾಮರ್ಥ್ಯಗಳಿಗೆ ನಿದರ್ಶನವೆಂದೂ, ಅವರಲ್ಲನೇಕರಿಗೆ ಇನ್ನೂ ಕುಂಚವನ್ನು ಹಿಡಿಯುವುದಕ್ಕೇ ಬರುತ್ತಿರಲಿಲ್ಲವೆಂದೂ, ಅವನು ಸಮಯಾ ಸಮಯವೆನ್ನದೆ ಹೇಳಿಕೊಳ್ಳುತ್ತಿದ್ದನು. ಅವನು ಹಿಂದೂ ಚಿತ್ರಗಾರರನ್ನು ಮಾತ್ರವೇ ಅಲ್ಲದೆ, ಮುಸಲ್ಮಾನ ಚಿತ್ರಗಾರರನ್ನು ಕೂಡ ಮನಸ್ವಿಯಾಗಿ ಟೀಕಿಸುತ್ತಿದ್ದನು. ತಾನು ಪಾರ್ಸಿಸ್ಥಾನದ ಮುಸಲ್ಮಾನನಾದುದರಿಂದ ಭಾರತೀಯ ಮುಸಲ್ಮಾನರಿಗಿಂತ ತಾನು ಶ್ರೇಷ್ಠನೆಂಬ ಭಾವನೆಯೂ ಅವನಿಗಿದ್ದಿತು. ತಾನು ಅವರನ್ನು ಆ ರೀತಿ ಟೀಕಿಸಿದಷ್ಟೂ ಅಂದಿನ ದಿಳ್ಳಿಯ ಸಮಾಜದಲ್ಲಿ ತಾನು ಹೆಚ್ಚಿನ ಸ್ಥಾನಮಾನಗಳನ್ನು ಪಡೆಯಬಹುದೆಂಬುದು ಅವನ ನಂಬಿಕೆ. ದೇಶಬಾಂಧವರನ್ನೇ ಕಡೆಗಂಡು, ಅವನ ಚಿತ್ರವಿಮರ್ಶೆಯ ಕುಹಕ ಟೀಕೆಗಳೆಲ್ಲ ನಿಜವೆಂದು ನಂಬಿ ದೇಶಬಾಂಧವರನ್ನೇ ಅನ್ಯಾಯವಾಗಿ ಆಕ್ಷೇಪಿಸುತ್ತಿದ್ದವರ ಸಂಖ್ಯೆಗೂ ಅಭಾವವಿರಲಿಲ್ಲ. ಹಿತ್ತಲ ಗಿಡ ಮದ್ದಲ್ಲ ವೆಂಬುದು ಅಂದೂ ಇಂದಿನಂತೆಯೇ ನಿಜವಾಗಿದ್ದಿತು. ಅವನಿಗೆ ಹೆಚ್ಚಿನ ವೇತನಗಳೂ, ಸಂಭಾವನೆಗಳೂ, ಲಭಿಸುತ್ತಿದ್ದುದನ್ನು ಕಂಡು ಅಬುಲ್ ಹಸನ್, ಮನೋಹರ್, ಗೋವರ್ಧನ್— ಈ ಮೂವರಿಗಿಂತ ಅವನ ಸ್ಥಾನ ಮಾನಗಳೇ ಮೇಲೆಂದೂ, ಅವನ ಒತ್ತಾಸೆಯಿಲ್ಲದೆ ಮುಂದೆ ಸಮಾಜ ದಲ್ಲಾಗಲಿ ಅಥವಾ ಸಮ್ರಾಟನ ಆಸ್ಥಾನದಲ್ಲಾಗಲಿ ಪುರಸ್ಕಾರ ದೊರೆಯ ಲಾರದೆಂದೂ ಭಾವಿಸಿದ್ದ ಕಿರಿಯ ಚಿತ್ರಗಾರರಲ್ಲಿ ಬಹು ಮಂದಿಗಳಿಗೆ (ಅವರು ಮೂವರಲ್ಲಿ) ಗೌರವವೇ ಕಡಮೆಯಾಯಿತು. ಇದೆಲ್ಲವನ್ನೂ ಕಂಡು ಆ ಮೂವರೂ ಮೂಕಸಂಕಟಪಡುತ್ತ ಜಹಾಂಗೀರನ ಬಳಿಗೇ ಹೋಗಿ ತಮ್ಮ ಸಂಕಟವನ್ನು ಹೇಳಿಕೊಂಡರು. ಸಮ್ರಾಟನ ಮಾತುಗಳನ್ನು ಕೇಳಿದ

ಮೇಲೆ ನಿರಾತಂಕವಾಗಿ ಸಂತೋಷದಿಂದ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿದರು.

ಹಾಗೆ ಹಿಂದಿರುಗಿದ ಮೇಲೆ ಕೆಲವು ದಿನಗಳಲ್ಲಿ ಸಮ್ರಾಟನಿಂದ ಅವರ ಚಿತ್ರಲೇಖನಕ್ಕಾಗಿ ಹೊಸ ಹೊಸ ಸನ್ನಿವೇಶಗಳು ಕಲ್ಪಿತವಾದುವು. ಅವರಿಗೆ ಸಂಭಾವನೆಗಳ ಮೇಲೆ ಸಂಭಾವನೆಗಳು ಲಭಿಸಿದುವು. ಕಲಾಪ್ರೋತ್ಸಾಹ ದಲ್ಲಿ ಜಹಾಂಗೀರನು ಉದಾರಿಗಳಲ್ಲಿ ಉದಾರಿಯಾಗಿದ್ದನು. ಚಿತ್ರಲೇಖನದ ವಿಷಯವಲ್ಲಂತೂ ಮತ್ತೂ ವಿಶೇಷ. ಶ್ಲಾಘನೆಯಲ್ಲಿಯೂ ಮತ್ತು ತಾನು ಮೆಚ್ಚಿದ ಕಲಾಕೃತಿಗಳಿಗೆ ಪಾರಿತೋಷಿಕಗಳನ್ನು ಕೊಡುವುದರಲ್ಲಿಯೂ ಅವನ ಧಾರಾಳ ಬುದ್ಧಿಯು ಇತಿಮಿತಿಯನ್ನೇ ಕಂಡುದಿಲ್ಲ. ಅದರ ಫಲಿತಾಂಶವಾಗಿ ಮೂವರು ಚಿತ್ರಗಾರರೂ ಮತ್ತು ಪಾರ್ಸಿಸ್ಥಾನದ ಚಿತ್ರ ಗಾರನೂ ಹೇರಳವಾಗಿ ಹಣವನ್ನು ಪಡೆದು ಸುಖಿಗಳಾದರು.

ಆದರೆ ಅವರು ಸ್ವಲ್ಪಕಾಲ ಮಾತ್ರವೇ ನಿರಾತಂಕವಾಗಿದ್ದರು. ಆ ಬಳಿಕ ಪುತ್ತೆ ಅವರ ಮನಸ್ಸಿನ ಶಾಂತಿಯು ಅಳಿದುಹೋಯಿತು. ಅರಮನೆಯ ದೃಶ್ಯಗಳು, ಉದ್ಯಾನಗಳ ವೈಖರಿಗಳು, ಮಸೀತಿಗಳು, ಸಾಧುಸಂತರ ಗೋರಿಗಳು ಮುಂತಾದ ಪವಿತ್ರ ಸ್ಥಳಗಳ ಪ್ರಶಾಂತ ಸನ್ನಿವೇಶಗಳು, ಪ್ರಕೃತಿ ಸೌಂದರ್ಯದ ಸಿರಿಬೀಡುಗಳು ಮುಂತಾದುವುಗಳನ್ನು ಚಿತ್ರಿಸಲು ಆಜ್ಞೆಗಳಾಗುತ್ತಿದ್ದುದು ತಪ್ಪಿಹೋಯಿತು. ಜಹಾಂಗೀರನ ಸೌಂದರ್ಯ ಪ್ರೇಮವನ್ನೂ, ಚಿತ್ರಕಲೆಯ ಅಭಿರುಚಿಯನ್ನೂ ಮತ್ತು ಔಚಿತ್ಯ ಜ್ಞಾನವನ್ನೂ ಅವರು ಕೊಂಡಾಡುತ್ತಿದ್ದುದು ನಿಂತುಹೋಗಿ, ಅದಕ್ಕೆ ಪ್ರತಿಯಾಗಿ ಅವನ ಮೇಲಿನ ಅಸಮಾಧಾನವು ನೆಲಸುವ ಸನ್ನಿವೇಶವೇ ಒದಗಿತು. ಏಕೆಂದರೆ, ಕಪ್ಪೆಗಳು, ಮೊಲಗಳು, ಕೋತಿಗಳು, ಕುದುರೆಗಳು, ಚಿಟ್ಟೆಗಳು— ಮುಂತಾದುವುಗಳ ಚಿತ್ರಗಳನ್ನು ಬರೆಯಬೇಕೆಂದು ಸಮ್ರಾಟನು ಆಜ್ಞಾಪಿಸ ತೊಡಗಿದನು. ಮೊಟ್ಟಮೊದಲು ಮುಸಲ್ಮಾನರಿಗೆ ಬಹಳ ಪ್ರಿಯವಾದ ಪಾರಿವಾಳಗಳ ಚಿತ್ರಗಳನ್ನು ಬರೆಯುವಂತೆ ಆಜ್ಞೆಯಾದಾಗ ಹಿಗ್ಗಿಹೋದ ಪಾರ್ಸಿಸ್ಥಾನದ ಚಿತ್ರಗಾರನು ಕೂಡ, ಆ ಬಳಿಕ ಇತರರೊಡನೆ ತಾನೂ ಬರೆಯಬೇಕಾಗಿ ಬಂದ ಕ್ಷುದ್ರ ಜಂತುಗಳನ್ನು ನೆನೆದು ನೆನೆದು ಕಿಡಿಕಿಡಿ

ಯಾಗತೊಡಗಿದನು. ಜಹಾಂಗೀರನ ವಿಶಾಲ ಹೃದಯದ ಅಗಾಧ ಪ್ರಕೃತಿ ಪ್ರೇಮವು ಅವರಿಗೆ ಅರ್ಥವಾಗಲಿಲ್ಲ. ರಾಜ ರಾಣಿಯರನ್ನೂ, ಸಮ್ರಾಜ್ಞೀ ಸಮ್ರಾಟರನ್ನೂ ಚಿತ್ರಿಸುತ್ತಿದ್ದ ಕುಂಚಗಳಲ್ಲಿ (ಚಿತ್ರಕಲೆಯನ್ನು ಅಭ್ಯಾಸ ಮಾಡುವ ಬಾಲಕರಂತೆ) ತಾವು ಕ್ಷುದ್ರಪ್ರಾಣಿಗಳನ್ನು ಬರೆಯುವ ಗತಿಯು ಒದಗಿತೇ—ಎಂದು ಅವರೆಲ್ಲರೂ ಮರುಗಿದರು. ಒಂದು ಸಲ ಪಾರ್ಶಿಸ್ಥಾನದ ಚಿತ್ರಗಾರನು ಒಂದು ಗೂಬೆಯನ್ನೂ, ಅಬುಲ್ ಹಸನ್ ಒಂದು ಹಂದಿಯನ್ನೂ. ಮನೋಹರ್ ಒಂದು ಅಳಿಲನ್ನೂ ಚಿತ್ರಿಸಬೇಕೆಂದು ಸಮ್ರಾಟನ ಅಪ್ಪಣೆಯಾಯಿತು. ಸಿಂಹಳದ್ವೀಪದಿಂದ ಬಂದಿದ್ದವನೊಬ್ಬನು ಬಾಲವಿಲ್ಲದ ವಿಲಕ್ಷಣವಾದ ಕರಿಯ ಕಪಿಯೊಂದನ್ನು ತಂದು ಜಹಾಂಗೀರನಿಗೆ ಕಾಣಿಕೆಯಾಗಿ ಒಪ್ಪಿಸಿದನು. ಅದರ ಮುಖವು ಕಪಟದ ಹಕ್ಕಿಯ ಮೂತಿಯಂತಿದ್ದಿತು. ಅದು ಬಹಳ ವಿಕಾರವಾಗಿದ್ದ ಪ್ರಾಣಿ. ಅದರ ಚಿತ್ರವನ್ನು ಗೋವರ್ಧನ್ ಬರೆಯಬೇಕೆಂದು ಜಹಾಂಗೀರನು ಅಪ್ಪಣೆ ಮಾಡಿದ್ದನು. ನಾಲ್ವರು ಚಿತ್ರಗಾರರೂ ತಮ್ಮ ದುರದೃಷ್ಟವನ್ನು ಹಳಿದುಕೊಳ್ಳುತ್ತ ಅವುಗಳನ್ನು ಚಿತ್ರಿಸುತ್ತಿದ್ದರು. ಅದೇ ಸಮಯದಲ್ಲಿ ಖಲೀಲ್ ಮಿರ್ಜಾ ಸಹ್ರಾಕಿ ಎಂಬ ಚಿತ್ರಗಾರನೊಬ್ಬನು ಬರೆದಿದ್ದ ಇನ್ನೂರುನಲವತ್ತು ಚಿತ್ರಗಳು ಜಹಾಂಗೀರನಿಗೆ ಸಮರ್ಪಿತವಾದುವು. ಜಹಾಂಗೀರನು ಅಪರಿಮಿತವಾದ ಸಂತೋಷದಿಂದ ಹೇರಳವಾಗಿ ಸಂಭಾವನೆಗಳನ್ನು ಕೊಟ್ಟನು. ಅದನ್ನು ಕಂಡು ನಾಲ್ವರು ಚಿತ್ರಗಾರರೂ ತಾಳ್ಮೆಗೆಟ್ಟರು. ತಾವೂ ಆ ಬಗೆಯ ಅನೇಕ ಚಿತ್ರಗಳನ್ನು ಅವಕ್ಕಿಂತಲೂ ಬಹಳ ಚೆನ್ನಾಗಿ ಬರೆಯಬಲ್ಲವರಾಗಿದ್ದುದನ್ನು ಅರಿತಿದ್ದೂ, ಜಹಾಂಗೀರನು ಆ ಕೆಲಸದಲ್ಲಿ ತಮ್ಮನ್ನು ನಿಯೋಜಿಸದೆ ಕೀಳು ಕೆಲಸದಲ್ಲಿ ನೇಮಕ ಮಾಡಿದ್ದುದಕ್ಕೆ ಅವನಿಗೆ ತಮ್ಮಲ್ಲಿದ್ದ ತಿರಸ್ಕಾರ ಬುದ್ಧಿಯೇ ಕಾರಣವೆಂದು ಏಕಕಂಠದಿಂದ ನಾಲ್ವರೂ ಸಾರಿದರು. ಪ್ರಾಣಿಚಿತ್ರಗಳನ್ನು ಬರೆಯುವ ಬವಣೆಯು ಬಂದಾಗಿನಿಂದ ಪಾರ್ಶಿಸ್ಥಾನದ ಚಿತ್ರಗಾರನೂ ದಿಳ್ಳಿಯ ಚಿತ್ರಗಾರರಾದ ಆ ಮೂವರ ಗೆಳೆಯನಾಗಿದ್ದನು. ಅವನ ಜಂಭವು ಜ್ವರ ಬಿಟ್ಟಂತೆ ಇಳಿದು ಹೋಗಿದ್ದಿತು. ಅವರು, ತಮ್ಮ ನಾಲ್ವರಿಗೂ ಹೀನ ಕಾರ್ಯವನ್ನು ಹೇಳಿ

ತಾವೇ ಹಿಂದೆ ಬರೆಯುತ್ತಿದ್ದ ಬಗೆಯ ಚಿತ್ರಗಳನ್ನು ತಂದೊಪ್ಪಿಸಿದವನಿಗೆ ಪುರಸ್ಕಾರ ಮಾಡಿದುದರ ಔಚಿತ್ಯವನ್ನು ಯೋಚಿಸಿ ನೋಡಬೇಕೆಂದೂ, ಸರಿಯಾದ ಚಿತ್ರವಿಮರ್ಶೆಯಿಂದ ನ್ಯಾಯವನ್ನು ದೊರೆಯಿಸಿಕೊಡಬೇಕೆಂದೂ ತಮ್ಮ ಯೋಗ್ಯತೆಗೆ ತಕ್ಕ ಕಾರ್ಯವನ್ನು ವಹಿಸಬೇಕೆಂದೂ ಜಹಾಂಗೀರನಿಗೆ ಮೊರೆಯಿಟ್ಟರು. ಜಹಾಂಗೀರನು ಹೆಚ್ಚು ಮಾತುಗಳಿಗೇ ಅಂದು ಅವಕಾಶ ಕೊಡದೆ, ಸಮ್ರಾಟನ ಆಜ್ಞೆಯನ್ನು ನೆರವೇರಿಸುವುದೇ ಅವರ ಕರ್ತವ್ಯ ವೆಂದು ಗಂಭೀರಮುದ್ರೆಯಿಂದ ತಿಳಿಸಿದನು. ಅವರು ನಾಲ್ವರೂ ಅಸಮಾಧಾನದಿಂದ ಒಳಗೊಳಗೇ ಬುಸುಗುಟ್ಟುತ್ತ, ಆದರ ಗೌರವಗಳ ತೋರಿಕೆಗಳಿಂದ ಸಮ್ರಾಟನನ್ನು ಬೀಳ್ಕೊಂಡು ಹಿಂತಿರುಗಿದರು.

ಆ ಬಳಿಕ ಚಿತ್ರಲೇಖನದ ಆಜ್ಞೆಗಳು ಇನ್ನೂ ಹೆಚ್ಚಾಗಿ ಬರುವುದಕ್ಕೆ ಪ್ರಾರಂಭವಾದುವು. ಪ್ರಾಣಿಗಳ ಚಿತ್ರಗಳನ್ನು ಬರೆಯುವುದರಲ್ಲಿ ಕೂಡ ಅವುಗಳ ಓಡಾಟದ ಚಿತ್ರಗಳು, ಅವು ಮಲಗಿರುವಾಗಿನ ಚಿತ್ರಗಳು, ಅವು ಜಗಳವಾಡುವಾಗಿನ ಚಿತ್ರಗಳು, ಅವಕ್ಕೆ ಭಯವಾದಾಗಿನ ಚಿತ್ರಗಳು— ಹೀಗೆ ಬಗೆಬಗೆಯ ಚಿತ್ರಗಳನ್ನು ಬರೆಯಬೇಕಾಯಿತು. ಮನಸ್ಸಿಲ್ಲದ ಕೆಲಸವನ್ನು ಮಾಡಿ ಮಾಡಿ ಚಿತ್ರಗಾರರು ನಾಲ್ವರೂ ಸೋತರು. ಎಷ್ಟು ದುಡಿದರೂ ಕೇಳಿದ ಕಾಲಕ್ಕೆ ಸರಿಯಾಗಿ ಚಿತ್ರಗಳನ್ನು ಬರೆದುಕೊಡುವುದಕ್ಕೆ ಸಾಧ್ಯವಿಲ್ಲದಷ್ಟು ಕೆಲಸ. ಮಿತಿಮೀರಿದ ಪ್ರಮಾಣದಲ್ಲಿ ಕೆಲಸ ಮಾಡ ಬೇಕಾಗಿದ್ದುದರಿಂದಲೂ ಮತ್ತು ಬೇಸರದಿಂದ ತುಂಬಿದ್ದ ಮನಸ್ಸಿನಿಂದ ಅವರೆಲ್ಲರೂ ದುಡಿಯುತ್ತಿದ್ದುದರಿಂದಲೂ ಚಿತ್ರಲೇಖನ ಕಲೆಯಲ್ಲಿ ಅವರಿಗೆ ಮೊದಲಿದ್ದ ಶ್ರದ್ಧಾಸಕ್ತಿಗಳು ಮಾಯವಾಗಿದ್ದುವು. ಕೆಲಕೆಲವು ಚಿತ್ರಗಳನ್ನು ತಾವೇ ಬರೆಯುತ್ತಿದ್ದರು; ಕೆಲಕೆಲವು ಚಿತ್ರಗಳನ್ನು ತಮ್ಮ ಶಿಷ್ಯರಿಂದ ಬರೆಯಿಸುತ್ತಿದ್ದರು. ಹೇಗೋ ಕೆಲಸವನ್ನು ತೂಗಿಸಿದರೆ ಸಾಕೆಂಬುದೊಂದೇ ಅವರ ಯೋಚನೆ. ಒಂದು ದಿನ ಅವರು ತಮಗೆ ಆಜ್ಞೆಯಾಗಿದ್ದಂತೆ ಚಿತ್ರ ಗಳನ್ನು ಒಪ್ಪಿಸಲು ಅರಮನೆಯ ಪ್ರಾಣಿಶಾಲೆಯ ಉದ್ಯಾನದಲ್ಲಿದ್ದ ಸಮ್ರಾಟನಲ್ಲಿಗೆ ಹೋಗಿದ್ದರು. ಪಾರ್ಸಿಸ್ಥಾನದ ಚಿತ್ರಗಾರನು ಬರೆದಿದ್ದ ಕಪ್ಪೆಯ ಚಿತ್ರಪಟದ ಅಂಚಿಗೆಲ್ಲ ಚಿನ್ನದ ಬಣ್ಣವನ್ನು ಲೇಪಿಸಿ ಅಲಂಕಾರ

ಮಾಡಿದ್ದನು. ಸಮ್ರಾಟನು "ಇವೊತ್ತು ಇದೇನು ಈ ಹೊಸ ರೀತಿ?" ಎಂದು ಕೇಳಿದಾಗ ಅವನು ರಾಜಕುಟುಂಬಗಳವರನ್ನೂ, ಸಮ್ರಾಟ ಕುಟುಂಬಗಳವರನ್ನೂ ಚಿತ್ರಿಸಿ ಈ ಬಣ್ಣವನ್ನು ಅವರ ಉಡಿಗೆತೊಡಿಗೆಗಳಿಗೆ ಉಪಯೋಗಿಸುವ ಕಾಲವು ಎಂದೋ ಕಳೆದುಹೋಯಿತು. ಅದಕ್ಕಾಗಿ ಹೀಗೆ ಮಾಡಿದೆ. ಈ ಮೂಲಕ ಮನಸ್ಸಿಗೆ ಸಮಾಧಾನ ಮಾಡಿಕೊಂಡೆ" ಎಂದನು. ಜಹಾಂಗೀರನು ಆ ಮಾತುಗಳ ಇಂಗಿತವನ್ನರಿಯದೆ ಹೋಗಲಿಲ್ಲ. ಆದರೂ ತನ್ನ ಮನಸ್ಸಿನಲ್ಲುಂಟಾದ ಪರಿಣಾಮವನ್ನು ತೋರ್ಪಡಿಸದೆ "ಒಳ್ಳೆಯ ಕೆಲಸ ಮಾಡಿದಿರಿ. ಇದು ರಾಜಕಪ್ಪೆಯ ಚಿತ್ರ. ಮನುಷ್ಯರ ರಾಜನ ಚಿತ್ರಕ್ಕೆ ಒಂದು ರೀತಿಯಲ್ಲಿ ಚಿನ್ನದ ಬಣ್ಣದ ಸಂಬಂಧ ವಿದ್ದರೆ, ಕಪ್ಪೆಗಳ ರಾಜನ ಚಿತ್ರಕ್ಕೆ ಮತ್ತೊಂದು ರೀತಿಯಲ್ಲಿ ಚಿನ್ನದ ಬಣ್ಣದ ಸಂಬಂಧವಿರಲಿ. ಅದೂ ಸೊಗಸೇ" ಎಂದು ಗಂಭೀರವಾಗಿ ಉತ್ತರ ಹೇಳಿದನು. ಮನೋಹರ್ ಸುಮ್ಮನಿರದೆ "ಜಹಾಪನಾ! ನಾವು ಚಿತ್ರಕರ್ಮ ವಿಧಾತರು. ಸಾಮ್ರಾಜ್ಯದಲ್ಲೇ ನಮಗೆ ಸಮಾನರಾದ ಚಿತ್ರ ಲೇಖಕರಿಲ್ಲವೆಂದು ತಾವೇ ಎಷ್ಟೋ ಸಲ ಪ್ರತ್ಯಕ್ಷವಾಗಿಯೂ ಪರೋಕ್ಷ ವಾಗಿಯೂ ಪ್ರಶಂಸೆ ಮಾಡಿದ್ದೀರಿ. ಈ ಕ್ಷುದ್ರಜಂತುಗಳ ಚಿತ್ರಗಳನ್ನು ಬರೆಯುವ ಶಿಕ್ಷೆಯನ್ನೇಕೆ ನಮಗೆ ವಿಧಿಸಿದ್ದೀರಿ? ಈ ಚಿತ್ರಗಳನ್ನು ಬರೆಯುವ ಸಂಕಟದಿಂದ ನಮ್ಮನ್ನು ಪಾರುಮಾಡುವುದೆಂದು?" ಎಂದನು. ಜಹಾಂಗೀರನಿಗೆ ಅಸಮಾಧಾನವಾಯಿತು. ಆದರೂ ಅವನು ಅದನ್ನು ತೋರ್ಪಡಿಸದೆ, "ಚಿತ್ರಕರ್ಮವಿಧಾತರೆಂಬ ಆತ್ಮಶ್ಲಾಘನೆಯ ಮಾತು ನಿಮ್ಮ ಬಾಯಲ್ಲಿ ಬರಬಾರದು. ಕೊಂಚ ತಲೆಯೆತ್ತಿ ನೋಡಿ. ಆ ಮೋಡಗಳು ಸೂರ್ಯನ ಬೆಳಕಿನಲ್ಲಿ ಹೇಗೆ ಬೆಳಗುತ್ತಿವೆ! ಅವುಗಳ ಸೊಗಸನ್ನು ಪೂರ್ತಿಯಾಗಿ ಚಿತ್ರಿಸಬಲ್ಲಿರಾ? ಮನುಷ್ಯನಿಗೆ ಅದು ಸಾಧ್ಯವೆ? ಕ್ಷುದ್ರ ಜಂತುಗಳೆಂದಿರಿ. ಈ ಕ್ಷುದ್ರ ಜಂತುಗಳನ್ನು ನಾನು ಸೃಷ್ಟಿಮಾಡಿದ್ದೇ ನೆಯೆ? ಭಗವಂತನು ಸೃಷ್ಟಿಸಿರುವ ಪ್ರಾಣಿಗಳನ್ನು ಕ್ಷುದ್ರಜಂತು ಗಳೆನ್ನಲು ನಮಗೆ ಅಧಿಕಾರವಿದೆಯೆ? ಬರೆಯುವ ಕೈಗೆ ಯಾವ ಚಿತ್ರ ವಾದರೇನು? ಬರೆಯಲಾರದ ಕೈಗೆ ಯಾವ ಚಿತ್ರವೊದಗಿ ಫಲವೇನು?

ನೀವೆಲ್ಲರೂ ಶ್ರೇಷ್ಠ ಚಿತ್ರಗಾರರು. ನೀವೇ ಹೀಗೆನ್ನಬಹುದೆ? ಅಲ್ಲಿ ನೋಡಿ, ಆ ಆಡಿನ ಮರಿಗಳು ತಲೆಯನ್ನು ಕುಣಿಸುತ್ತ ಎಷ್ಟು ಚೆನ್ನಾಗಿ ನೆಗೆನೆಗೆದು ಓಡುತ್ತಿವೆ! ಈ ದೃಶ್ಯವನ್ನು ಯಥಾವತ್ತಾಗಿ ಚಿತ್ರಿಸುವುದು ನಮಗೆ ಸಾಧ್ಯವೆ? ಚಿತ್ರಗಳಿಗೆ ಜೀವಕಳೆಯನ್ನೂ ತುಂಬುವುದು ಸಾಧ್ಯವಾದಂದು ಅದೂ ಸಾಧ್ಯ" ಎಂದು ಹೇಳಿ ನಕ್ಕನು. ಚಿತ್ರಗಾರರು ಸಮ್ರಾಟನನ್ನು ಬೀಳ್ಕೊಂಡು ತಮಗೆ ತೇಜೋವಧೆಯಾಯಿತೆಂದು ಗೊಣಗುತ್ತ ಹೊರಟರು. ಕೋಪದಿಂದಲೂ ಅಸಮಾಧಾನದಿಂದಲೂ ಉರಿಯುತ್ತಿದ್ದ ಅವರಿಗೆ ಉದ್ಯಾನದಿಂದ ಹೊರಗೆ ಹೋದ ಮೇಲೆ ಮಾತನಾಡುವಷ್ಟು ವಿವೇಚನೆಯೂ ಇರಲಿಲ್ಲ. ಅಲ್ಲಿಯೇ ಒಂದು ಕಡೆ ನಿಂತು ತಮ್ಮ ಮನಸ್ಸಿಗೆ ತೃಪ್ತಿಯಾಗುವಷ್ಟುಮಟ್ಟಿಗೂ ಸಮ್ರಾಟನನ್ನು ದೂರಿದರು. ಕವಿಗಳು ಮಾಡಿದ್ದ ರಾಜಸಿಂದೆಗಳ ವಾಕ್ಯಗಳನ್ನು ಉದಾಹರಿಸಿದರು. ಜಹಾಂಗೀರನದು ಕೋಣನ ಬುದ್ಧಿಯೆಂದು ಜರಿದರು. ತಮ್ಮ ಯೋಗ್ಯತೆಯನ್ನರಿಯದ ಪ್ರಭುವಿನ ಸೇವೆಯಲ್ಲಿರುವುದಕ್ಕಿಂತ ನರಕವಾಸವೇ ಮೇಲೆಂದರು. ಪಾರ್ಸಿಸ್ಥಾನದ ಚಿತ್ರಗಾರನೂ ತನ್ನ ದೇಶದ ಸಾಹಿತ್ಯದಿಂದ ರಾಜರ ತಿಳಿಗೇಡಿತನದ ಬಣ್ಣನೆಗಳನ್ನು ಉದಾಹರಿಸಿ ಅರ್ಥವನ್ನು ವಿವರಿಸಿ ತೃಪ್ತಿಹೊಂದಿದನು. ಕೊನೆಗೆ, ತಾವು ಮೊಗಲ್ ಸಮ್ರಾಟನ ಆಸ್ಥಾನದಲ್ಲಿದ್ದ ಚಿತ್ರಗಾರರಲ್ಲವೆಂದೂ, ತಾವು ಅವನ ಪ್ರಾಣಿಶಾಲೆಯಲ್ಲಿದ್ದ ಮೃಗ ಪಕ್ಷಿಗಳ ಆಸ್ಥಾನದ ಚಿತ್ರಗಾರರೆಂದೂ ಏಕವಾಕ್ಯತೆಯಿಂದ ನಿರ್ಧರಿಸಿ ವಿಕಟವಾಗಿ ನಗುತ್ತ ಮುಂದೆ ಹೋದರು. ಮಧ್ಯಮಧ್ಯದಲ್ಲಿ ನಿಂತು ಮತ್ತೆ ಮತ್ತೆ ಜಹಾಂಗೀರನ ವಿಲಕ್ಷಣವಾದ ಚಿತ್ರಪ್ರೇಮದ ಮೇಲೂ, ತಮ್ಮ ವಿಷಮಸಂಕಟದ ಮೇಲೂ, ಕಟುವಾಗಿ ಟೀಕೆ ಮಾಡುತ್ತಿದ್ದರು. ಅವನಿಗೆ ಚಿತ್ರವಿಮರ್ಶೆಯ ಗಂಧವೇ ತಿಳಿಯದೆಂದೂ, ಕುದುರೆಗಳ ಜೊತೆಯಲ್ಲಿ ಕತ್ತೆಗಳಿದ್ದರೂ ಬಾಲಗಳನ್ನೆಣಿಸಿ ಕುದುರೆಗಳ ಸಂಖ್ಯೆಯನ್ನು ನಿರ್ಧರಿಸುವ ಪ್ರಾಜ್ಞನೆಂದರೆ ಪ್ರಪಂಚದಲ್ಲಿ ಜಹಾಂಗೀರನೊಬ್ಬನೇ ಆಗಿದ್ದನೆಂದೂ ಸಿದ್ಧಾಂತ ಮಾಡಿದರು. ಅವರು ಉದ್ಯಾನದಿಂದ ಹೊರಬಿದ್ದು ಹತ್ತು ಹೆಜ್ಜೆ ಮುಂದುವರಿಯುವಷ್ಟರಲ್ಲಿ ಅವರ ಬಳಿಗೆ ಬಂದ ಜಹಾಂಗೀರನ ಸಮ್ಮುಖದ

ಅಧಿಕಾರಿಯೊಬ್ಬನು "ಸಮ್ರಾಟರನ್ನು ಕೋಣನೆಂದು ಕರೆದು ದೂರುವುದರಲ್ಲಿ ವಿನಿಯೋಗವಾಗುವ ಕಾಲವನ್ನು ಚಿತ್ರಲೇಖನಕ್ಕೆ ವಿನಿಯೋಗಿಸುವುದು ಮೇಲೆಂಬುದು ಸಮ್ರಾಟರ ಆಜ್ಞೆ" ಎಂದು ತಿಳಿಸಿ ಹೊರಟುಹೋದನು. ಚಿತ್ರಗಾರರ ಮನಸ್ಸಿಗೆ ಸಿಡಿಲು ಬಡಿದಂತಾಯಿತು. ಮುಂದೇನು ಗತಿಯೆಂದು ಅವರು ನಡುಗಿಹೋದರು. ತಾವು ನಿಂತು ಮಾತನಾಡಿದ ಕಡೆ ನಿರ್ಜನ ವಾಗಿದ್ದಿತೆಂದು ಅವರು ನಂಬಿದ್ದರು; ಅಲ್ಲಿಗೆ ಅತಿ ಸಮೀಪದಲ್ಲಿದ್ದ ಲತಾಗೃಹದಲ್ಲಿದ್ದ ಗೂಢಚಾರನ ವಿಷಯವನ್ನು ಅವರು ಅರಿತಿರಲಿಲ್ಲ; ಅಲ್ಲದೆ, ಕೋಪಭರದಲ್ಲಿ ತಾವು ಜಾಗಟೆ ಹೊಡೆದಂತೆ ಮಾತನಾಡುತ್ತಿದ್ದುದರ ಪರಿವೆಯೂ ಅವರಿಗಿರಲಿಲ್ಲ. ಜಹಾಂಗೀರನು ಒಲಿದಾಗ ಸರಳಹೃದಯದ ಸರಸಿಯಾಗಿದ್ದುದನ್ನೂ, ಮುನಿದಾಗ ಕಠೋರ ಹೃದಯದ ಕ್ರೂರಿಯಾಗಿದ್ದು ದನ್ನೂ ಅವರು ಬಲ್ಲವರಾಗಿದ್ದರು. ಅದನ್ನು ಸ್ಮರಿಸಿದಾಗ ಅವರ ಭಯವು ಮತ್ತೂ ಹೆಚ್ಚಿತು; ಮೈ ನಡುಗಿತು.

ಅಂದು ಗೋವರ್ಧನನು ತನ್ನ ಭಯಕ್ಕೆ ಕಾರಣವನ್ನು ತಿಳಿಸಿ ನಡೆದುದನ್ನೆಲ್ಲ ಸಾಂಗವಾಗಿ ಹೇಳಿದಾಗ ಅವನ ಪತ್ನಿಯು ಸಹಧರ್ಮಿಣಿ ಯಾದವಳಿಗೆ ತಕ್ಕ ರೀತಿಯಲ್ಲಿ ತನ್ನ ಸಂತಾಪವನ್ನೂ ಮತ್ತು ಸಹಾನುಭೂತಿ ಯನ್ನೂ ಸೂಚಿಸಿ ಸಮಾಧಾನ ಹೇಳಿದಳು; ಅಲ್ಲದೆ "ನಿಮ್ಮ ಸಂಕಟದಲ್ಲಿ ನಾನೂ ಸಮಭಾಗಿಯಾಗಿದ್ದೇನೆ. ನಮಗೇನೂ ಮಕ್ಕಳಿಲ್ಲ, ಮರಿಯಿಲ್ಲ; ನಿಮಗೆ ನಾನು, ನನಗೆ ನೀವು; ನಿಮ್ಮ ಮನಸ್ಸಿಗೆ ಅಸಮಾಧಾನವಾಗುವಂತೆ ಮಾಡುವ ಉದ್ದೇಶ ನನಗಿಲ್ಲ. ಆದರಿಂದ ನನ್ನ ಮಾತುಗಳನ್ನು ತಪ್ಪು ತಿಳಿದುಕೊಳ್ಳಬೇಡಿ. ಜಹಾಂಗೀರ ಮುತ್ತಿನಂಥ ಮಾತನಾಡಿದ್ದಾನೆ. ಭಗವಂತ ಸೃಷ್ಟಿಸಿದ ಪ್ರಾಣಿಗಳನ್ನು ಕ್ಷುದ್ರಜಂತುಗಳೆನ್ನಲು ನಮಗೆ ಅಧಿಕಾರವಿದೆಯೆ—ಎಂಬ ಮಾತು ಎಷ್ಟು ಚೆನ್ನಾಗಿದೆ, ನೋಡಿ. ನೀವೇ ಅನೇಕ ಸಲ ನನ್ನೊಡನೆ ಹೇಳಿದ್ದೀರಿ. ಸರ್ವಭೂತಗಳ ಹೃದಯದಲ್ಲಿಯೂ ಭಗವಂತನಿರುವುದಾಗಿ ಗೀತೆಯಲ್ಲಿ ಭಗವಂತನೇ ಹೇಳಿದ್ದಾನೆಂತ. ಅಲ್ಲಿಗೆ ಅವನು ನಮ್ಮ ಹೃದಯದಲ್ಲಿರುವಂತೆಯೇ ಪ್ರಾಣಿಗಳ ಹೃದಯದಲ್ಲಿಯೂ ಇರಬೇಕಲ್ಲಾ! ಹಾಗಿರುವಾಗ್ಗೆ ಅವುಗಳನ್ನು ಕ್ಷುದ್ರಜಂತುಗಳೆನ್ನಬಹುದೆ?

ಆತ ಗೀತೆಯನ್ನು ಓದಿರಲಾರ. ಆದರೂ ಎಂಥ ಮಾತನಾಡಿದ್ದಾನೆ! ಆತನದು ದೊಡ್ಡ ಜೀವ. ನಮಗಾಗಿ ಎಷ್ಟು ಹಣ ಸುರಿದಿದ್ದಾನೆ! ಅಷ್ಟು ಹಣವನ್ನು ಸುರಿದವನ ಮನಸ್ಸಿಗೆ ತೃಪ್ತಿಯಾಗುವಂತೆ ಕೆಲಸ ಮಾಡುವುದು ನಮ್ಮ ಧರ್ಮವಲ್ಲವೆ? ಭಗವಂತನೇ ಮೊದಲಿನ ಮೂರು ಅವತಾರಗಳಲ್ಲಿ ಪ್ರಾಣಿಗಳ ರೂಪದಲ್ಲಿ ಅವತಾರ ಮಾಡಿದ್ದನೆಂದ ಮೇಲೆ, ಪ್ರಾಣಿಗಳನ್ನು ನಿಕೃಷ್ಟವೆಂದೇಕೆ ಹಳಿಯಬೇಕು? ಸಮ್ರಾಟನು ಹೇಳಿದ ಕೆಲಸವನ್ನು ಹೇಗೂ ಮಾಡಬೇಕು. ಸಿಟ್ಟುಸಿರು ಬಿಡುತ್ತಾ ಮಾಡಿದರೂ ಮಾಡಬೇಕು; ನಗುತ್ತಾ ಮಾಡಿದರೂ ಮಾಡಬೇಕು. ನಗುನಗುತ್ತಾ ಶ್ರದ್ಧೆಯಿಂದ ಮಾಡಿದರೆ ಸಮ್ರಾಟನಿಗೆ ಸಂತೋಷವಾಗುತ್ತದೆ'' ಎಂದಳು. ಭಾವಜೀವಿಯಾದ ಗೋವರ್ಧನನು ಉಬ್ಬಿದ ಹೃದಯದಿಂದ ''ನೀನು ನನ್ನ ಹೆಂಡತಿಯಲ್ಲ. ನನ್ನ ಗುರು'' ಎಂದು ಹೇಳಿದನು; ಅವಳು ''ಕಲಾವಿದರ ಸಹವಾಸ ಹುಚ್ಚರ ಸಹವಾಸ'' ಎಂದು ಹೇಳಿ ನಕ್ಕಳು. ಅಂದು ಮಧ್ಯಾಹ್ನ ಮನೆಯನ್ನು ಬಿಟ್ಟುಹೋದ ಗೋವರ್ಧನನು ಸಂಜೆಯವರೆಗೂ ಮನೆಗೇ ಬರಲಿಲ್ಲ. ಸಂಜೆಯ ವೇಳೆಗೆ ಗೋವರ್ಧನನು ಮನೆಗೆ ಬಂದಾಗ ಅವಳು ಆದರದಿಂದ ''ನನ್ನ ಮಾತಿನಿಂದ ನಿಮಗೆ ಅಸಮಾಧಾನವಾಯಿತೇನೋ—ಎಂದು ಜೀವವೇ ಹಾರಿಹೋಗಿತ್ತು. ಸದ್ಯ, ಮನೆಗೆ ಬಂದಿರಲ್ಲಾ! ಬದುಕಿದೆ'' ಎಂದು ಮೃದುವಾಗಿ ನಕ್ಕಳು. ಅವನೂ ನಗುತ್ತ ''ಗುರುಗಳಿಗೆ ಪಾಠ ಒಪ್ಪಿಸಬೇಕಾದರೆ ಕೃಷಿ ನಡೆಯಬೇಕಲ್ಲಾ! ಅದಕ್ಕಾಗಿ ಹೋಗಿದ್ದೆ. ಪ್ರಾಣಿಶಾಲೆಯಲ್ಲಿ ಒಂದು ವಿಜಾತಿಯ ಕತ್ತೆಯನ್ನಿಟ್ಟಿದ್ದಾರೆ. ಅದರ ಚಿತ್ರವನ್ನು ಬರೆದು ನಾಳೆ ಸಂಜೆಯೊಳಗಾಗಿ ಕಳುಹಿಸಬೇಕೆಂದು ನಿನ್ನೆಯೇ ಅಪ್ಪಣೆಯಾಗಿತ್ತು. ಅದನ್ನು ನೋಡಿ ಚಿತ್ರ ಬರೆಯಲು ಹೋಗಿದ್ದೆ. ಅದನ್ನು ನೋಡಿದಾಗ ನಿನ್ನ ಮಾತುಗಳೇ ಕಿವಿಯಲ್ಲಿ ಮೊಳಗುತ್ತಿದ್ದುವು. ಭಗವಂತನು ಅದರ ಹೃದಯದಲ್ಲಿರುವುದರಿಂದ ಅದೂ ಒಂದು ಪೂಜ್ಯ ವಸ್ತುವೆಂಬ ಭಾವನೆಯಿಂದ ನೋಡತೊಡಗಿದೆ. ಎಷ್ಟು ಸಾರಿ ಎಷ್ಟು ಚೆನ್ನಾಗಿ ನೋಡಿದರೂ ಪ್ರತಿ ಸಲವೂ ಆ ಕತ್ತೆಯು ಹೊಸದಾಗಿಯೇ ಕಂಡಿತು. ಇವೊತ್ತಿನ ಅನುಭವವೆಂದೂ ಆಗಿರಲಿಲ್ಲ. ಭಗವಂತನು ದಿವ್ಯ

ದೃಷ್ಟಿಯನ್ನೇ ಅನುಗ್ರಹಿಸಿದ್ದನೋ ಏನೋ! ಆ ಕತ್ತೆಯು ಎಷ್ಟು ಸುಂದರವಾಗಿ ಕಂಡಿತೋ ನೋಡು! ಅದರ ಸೌಂದರ್ಯವನ್ನೇ ನನ್ನ ಕಣ್ಣುಗಳು ಹೀರಿಬಿಟ್ಟುವು. ಹಿಂದೆ ಪ್ರಾಣಿ ಚಿತ್ರಗಳನ್ನು ಬರೆದಾಗಲೆಲ್ಲ, ಪ್ರಾಣಿಗಳನ್ನು ದೂರದಿಂದ ನೋಡಿ ಅಲಕ್ಷ್ಯದಿಂದಲೂ ತಾತ್ಸಾರದಿಂದಲೂ ಗೊಣಗುಟ್ಟುತ್ತ ಬರೆಯುತ್ತಿದ್ದೆ. ಇಂದು ಆ ಪವಿತ್ರ ಪ್ರಾಣಿಯೂ ಭಗವಂತನ ನೆಲೆಯೆಂದೂ, ಭಗವಂತನ ಅಮೃತ ಹಸ್ತದಿಂದಲೇ ಅದೂ ಸೃಷ್ಟಿಯಾಗಿದ್ದಿತೆಂದೂ ಭಾವಿಸಿದಾಗ, ನನ್ನ ಮನೋಧರ್ಮವೇ ಬೇರೆ ಯಾಯಿತು; ನನ್ನ ಹೃದಯವು ಆನಂದದಿಂದ ಕುಣಿದಾಡಿತು. ಅದರ ಚಿತ್ರವನ್ನೇ ಹೇಗೆ ಇಳಿಸಿದ್ದೇನೆ, ನೋಡು. ಗುರುಗಳಿಗೆ ತೃಪ್ತಿಯಾಯಿತೆ?'' ಎಂದನು. ಅವಳು ಅಚ್ಚರಿಗೊಂಡು, ''ನಿಮ್ಮ ಹಾಳು ಗುರುಗಳ ಮಾತು ಹಾಗಿರಲಿ. ದೇವರೇ ತೃಪ್ತಿಪಡುವಂತಿದೆ. ನಾಳೆ ಬೆಳಗ್ಗೆಯೇ ಸಮ್ರಾಟರಿಗೆ ಕಳುಹಿಸಿಬಿಡಿ. ಅವರ ಮನಸ್ಸಿಗೆ ಸಂತೋಷ ಉಂಟುಮಾಡುವುದೊಂದೇ ಅವರ ಕೋಪವನ್ನಿಳಿಸುವ ದಾರಿ. ಹಣದ ರಾಶಿಯನ್ನು ಕೊಟ್ಟು ಕೋಣ ನೆಂದು ಕರೆಯಿಸಿಕೊಂಡವರಿಗೆ ಕೋಪ ಬಂದರೆ ಆಶ್ಚರ್ಯವೇನು?'' ಎಂದಳು. ಗೋವರ್ಧನನು ''ನಾಳೆಯವರೆಗೂ ಏಕೆ? ಈಗಲೇ ಕಳುಹಿ ಸುತ್ತೇನೆ. ಇದನ್ನು ನೋಡಿ ಅವರೂ ಸಂತೋಷಿಸಲಿ!'' ಎಂದು ಹೇಳಿದನು. ಆದರೂ ಅವನ ಮನಸ್ಸಿನಿಂದ ಅಮಂಗಳದ ಶಂಕೆಯು ಮರೆಯಾಗಿರಲಿಲ್ಲ. ಅಂದು ಬೆಳಗ್ಗೆ ಅವನೂ ಅವನ ಜೊತೆಯವರೂ ಆಡಿದ್ದ ಮಾತುಗಳು ಎಂತಹವರನ್ನೂ ಕೆರಳಿಸುವಷ್ಟು ಕಟುವಾಗಿಯೂ ಅನ್ಯಾಯವಾಗಿಯೂ ಇದ್ದುವು.

ತರುವಾಯ ಎರಡು ದಿನಗಳ ಮೇಲೆ ಅರಮನೆಯ ಅಧಿಕಾರಿಗಳು ಬಂದು, ಬಾಬರ್ ಮುಂತಾದ ಮೊಗಲ್ ಸಮ್ರಾಟರುಗಳ ಸಣ್ಣಸಣ್ಣ ಚಿತ್ರ ಗಳನ್ನು ನಾಲ್ವರು ಚಿತ್ರಗಾರರಿಗೂ ತಂದುಕೊಟ್ಟು, ಅವುಗಳನ್ನು ದೊಡ್ಡ ಪ್ರಮಾಣಗಳಲ್ಲಿ ಆದಷ್ಟು ಚೆನ್ನಾಗಿ ಚಿತ್ರಿಸಬೇಕೆಂದೂ, ಅದೇ ಪ್ರಮಾಣದಲ್ಲಿ ಜಹಾಂಗೀರ್ ಮುಂತಾದ ಕೆಲವರನ್ನೂ ಚಿತ್ರಿಸಬೇಕೆಂದೂ, ಅವುಗಳನ್ನು ಹಡಗಿನ ಮೇಲೆ ವಿದೇಶದ ಒಂದು ರಾಜಾಸ್ಥಾನಕ್ಕೆ ಕಳುಹಿಸುವ

ಉದ್ದೇಶವಿದ್ದಕಾರಣ ಒಂದೇ ಪ್ರಮಾಣದ ಆ ಚಿತ್ರಪಟಗಳನ್ನು ಬರೆದು ಸಕಾಲಕ್ಕೆ ಒಪ್ಪಿಸಬೇಕೆಂದೂ ಸಮ್ರಾಟನ ಅಪ್ಪಣೆಯಾಗಿದ್ದಿತೆಂದು ತಿಳಿಸಿದರು. ಅದನ್ನು ಕೇಳಿ ನಾಲ್ವರು ಚಿತ್ರಗಾರರಿಗೂ ಅಮಿತವಾದ ಸಂತೋಷವುಂಟಾಯಿತು. ಆದರೆ ಆ ಹಡಗು ಹೊರಡಲು ಗೊತ್ತಾಗಿದ್ದ ದಿನವನ್ನು ಆ ಅಧಿಕಾರಿಗಳಿಂದ ಕೇಳಿ ತಿಳಿದುಕೊಂಡಾಗ, ಅದು ತೀರ ಸಮೀಪವಾಗಿದ್ದುದನ್ನು ಕಂಡು ಎದೆಯು ಝಲ್ಲೆಂದಿತು. ಅಧಿಕಾರಿಗಳು ಹೊರಟು ಹೋದ ಮೇಲೆ ದೀರ್ಘಕಾಲ ಚರ್ಚೆಮಾಡಿ ತಮ್ಮಲ್ಲಿ (ಅವರು ನಾಲ್ವರೂ ಬರೆಯಬೇಕಾದ) ಚಿತ್ರಪಟಗಳನ್ನು ಹಂಚಿಕೆ ಮಾಡಿಕೊಂಡರು. ಚಿತ್ರಪಟಗಳ ಸಂಖ್ಯೆಯನ್ನೂ, ಅವುಗಳನ್ನು ಬರೆದು ಪೂರೈಸಿ ಒಪ್ಪಿಸಬೇಕಾದ ಅಲ್ಪಾವಧಿಯನ್ನೂ ಕುರಿತು ಯೋಚಿಸಿದಂತೆಲ್ಲ ಅವರ ಮನಸ್ಸಿಗೆ ದಿಗಿಲಾಯಿತು. ಆದರೆ ಪ್ರಾಣಿ ಚಿತ್ರಗಳನ್ನು ಬರೆಯುವ ಕೋಟಲೆಯು ತಪ್ಪಿತೆಂಬ ಸಂತೋಷವೂ ಆಯಿತು. ಅದನ್ನು ಹೇಳಿಕೊಂಡು ತನ್ನ ಮೂವರು ಸಂಗಡಿಗರೂ ಆನಂದದಿಂದ ಕೋಲಾಹಲ ಪಡುತ್ತಿರುವಲ್ಲಿ, ಗೋವರ್ಧನನು "ನಾವೂ ಪ್ರಾಣಿಗಳೇ ತಾನೆ! ಪ್ರಾಣಿ ಚಿತ್ರಗಳಲ್ಲಿ ಮನುಷ್ಯರ ಚಿತ್ರಗಳೂ ಸೇರಲೇಬೇಕಷ್ಟೆ! ವಹಿಸಿದ ಕೆಲಸವನ್ನು ಶ್ರದ್ಧೆಯಿಂದ ಮುಗಿಸಿದರಾಯಿತು" ಎಂದನು. ಅವರು ಮೂವರೂ ತಮ್ಮ ಆನಂದವನ್ನು ಅವನು ಕೆಡಿಸಿದುದಕ್ಕಾಗಿ ಅವನನ್ನು ಆಕ್ಷೇಪಿಸಿ, ಹಾಲಿನ ಕೊಡಕ್ಕೆ ಹುಳಿ ಹಿಂಡಿದವನೆಂದು ಹಳಿದರು. ಅವರು ನಾಲ್ವರೂ ಹಗಲೂ ರಾತ್ರಿ ಶ್ರಮಿಸಿದರೂ ತಾವು ಬರೆಯಬೇಕಾಗಿದ್ದ ಚಿತ್ರಗಳನ್ನು ಸಕಾಲದಲ್ಲಿ ಪೂರೈಸುವುದು ಸಾಧ್ಯವಾದೀತೋ ಇಲ್ಲವೋ—ಎಂದು ತಲ್ಲಣಗೊಂಡರು. ಆದರೂ ಅವರೆಲ್ಲರೂ ಉತ್ಸಾಹದಿಂದ ಕಾರ್ಯಾರಂಭ ಮಾಡಿದರು.

ಮನುಷ್ಯನು ಒಂದನ್ನೆಣಿಸಿದರೆ ದೈವವು ಮತ್ತೊಂದನ್ನೆಣಿಸುತ್ತದೆ. ದೈವವು ಸುಮುಖವಾಗಿದ್ದಾಗ ಮನುಷ್ಯಪ್ರಯತ್ನಗಳಿಗೆ ಕಾರ್ಯಸಿದ್ಧಿಯು ಕಟ್ಟಿದ ಬುತ್ತಿ. ದೈವವು ವಿಮುಖವಾದಾಗ ಮನುಷ್ಯ ಪ್ರಯತ್ನಗಳೆಂದರೆ ಹೊಳೆಯಲ್ಲಿ ಕದಡಿದ ಹುಣಿಸೆಯಹಣ್ಣಿನಂತೆ. ತನ್ನ ಚಿತ್ರಗಳನ್ನು ಅರೆವಾಸಿ ಬರೆದಿದ್ದಾಗಲೇ ಪಾರ್ಸಿಸ್ಥಾನದ ಚಿತ್ರಗಾರನು ರೋಗಗ್ರಸ್ತನಾದನು. ಚಿತ್ರ

ಗಳನ್ನು ಸಕಾಲಕ್ಕೆ ಪೂರೈಸುವುದು ಅವನಿಗೆ ಅಸಾಧ್ಯವಾಯಿತು. ಮನೋಹರನ ತಂಗಿಯ ಗಂಡನು ಮತ್ತೊಂದು ಊರಿನಲ್ಲಿ ಮೃತಪಟ್ಟ ವಾರ್ತೆಯು ಬಂದುದರಿಂದಲೂ, ಅವಳಿಗೆ ಗಂಡು ದಿಕ್ಕೇ ಇಲ್ಲದಿದ್ದುದರಿಂದಲೂ, ಅವನು ಅವಳಿದ್ದ ಊರಿಗೆ ಹೋಗಲೇಬೇಕಾಯಿತು. ಅವನದೂ ಅರೆಗೆಲಸ. ಈ ಪರಿಸ್ಥಿಯಲ್ಲಿ ಅಬುಲ್ ಹಸನ್ ಮತ್ತು ಗೋವರ್ಧನ್— ಇಬ್ಬರೂ ತಮ್ಮ ಕೆಲಸದ ಜೊತೆಗೆ ಅವರಿಬ್ಬರ ಅರೆಗೆಲಸವನ್ನೂ ಪೂರೈಸಿ ಹಡಗು ಹೊರಡುವ ಹೊತ್ತಿಗೆ ಚಿತ್ರಗಳನ್ನು ಒಪ್ಪಿಸಬೇಕಾಗಿದ್ದಿತು. ಅವರಿಗೆ ಪ್ರಾಣವು ಒಂದು ; ದೇಹಗಳು ನಾಲ್ಕು. ಹಾಗಿರುವಲ್ಲಿ ಒಬ್ಬರನ್ನು ಮತ್ತೊಬ್ಬರು ಬಿಟ್ಟುಕೊಡುವುದೆಂದರೇನು ?

ನಾಲ್ವರ ಹೊರೆಯು ಇಬ್ಬರ ಮೇಲೆ ಬಿದ್ದಿತು. ಇಬ್ಬರ ಮೇಲಿದ್ದ ಹೊರೆಯೇ ಹೊರಲಾರದಷ್ಟು ಭಾರವಾಗಿದ್ದಾಗ, ನಾಲ್ವರ ಹೊರೆಯನ್ನು ಇಬ್ಬರು ವಹಿಸುವ ಬಗೆ ಹೇಗೆ? ಅಬುಲ್ ಹಸನ್ ಮತ್ತು ಗೋವರ್ಧನ್- ಇಬ್ಬರೂ ನಿದ್ರಾಹಾರಗಳನ್ನು ಅಲಕ್ಷ್ಯಮಾಡಿ ಶ್ರಮಿಸಿದರೂ, ಚಿತ್ರಗಳನ್ನು ಪೂರೈಸಿ ಒಪ್ಪಿಸುವುದು ಸಕಾಲಕ್ಕೆ ಸಾಧ್ಯವಾಗಲಿಲ್ಲ. ಎರಡು ದಿನ ತಡವಾಯಿತು. ಅಷ್ಟರಲ್ಲಿ ಹಡಗು ಹೊರಡುವ ದಿನವು ಸಮೀಪಿಸಿದ್ದ ಕಾರಣ, ಚಿತ್ರಗಳನ್ನು ಕರಾವಳಿಗೆ ಮುಟ್ಟಿಸುವುದು ಸಮ್ರಾಟನ ಸಾಧನ ಸಂಪತ್ತುಗಳಿಗೂ ಸಾಧ್ಯವಾಗಲಿಲ್ಲ. ಆ ವೇಳೆಗೆ ಪಾರ್ಸಿಸ್ಥಾನದ ಚಿತ್ರಗಾರನಿಗೂ ರೋಗವು ಗುಣವಾಗಿದ್ದಿತು. ಮನೋಹರನೂ ತಂಗಿಯೊಡನೆ ಹಿಂತಿರುಗಿದ್ದನು. ಸೋದರ ವಾತ್ಸಲ್ಯದಿಂದಿದ್ದ ನಾಲ್ವರು ಚಿತ್ರಗಾರರೂ ತಮಗೆ ಒದಗಬಹುದಾದ ವಿಪತ್ತು ಎಂತಹುದೆಂಬುದನ್ನು ಚರ್ಚಿಸಿ ಚರ್ಚಿಸಿ ಸಂಕಟಪಡುತ್ತಿದ್ದರು.

ಚಿತ್ರಗಳನ್ನೊಪ್ಪಿಸಿದ ಎರಡು ದಿನಗಳಿಗೇ ಅರಮನೆಯ ಅಧಿಕಾರಿಗಳು ಅವರ ಬಳಿಗೆ ಬಂದರು. ನಾಲ್ವರೂ ಭೀತಿಯಿಂದ ತಲ್ಲಣಿಸಿದರು. ಅವರು ನಾಲ್ವರೂ ತಮ್ಮೊಡನೆ ಆಗಲೇ ಬಂದು ಸಮ್ರಾಟನನ್ನು ಕಾಣಬೇಕೆಂಬ ಆಜ್ಞೆಯನ್ನು ಅಧಿಕಾರಿಗಳು ತಿಳಿಸಿದರು. ಅಂದು ಅವರಿಗೆ ಸಮ್ರಾಟನ ಭೇಟಿಯು ದೊರೆತುದು ನೂರ್ಜಹಾನಳ ಅಂತಃಪುರದಲ್ಲಲ್ಲ ; ವಿಚಾರಣೆಯ

ಮಹಲಿನಲ್ಲಿ. ವಿಚಾರಣೆಯ ಆಸನದಲ್ಲಿ ಮಂಡಿಸಿದ್ದ ಜಹಾಂಗೀರನನ್ನು ಕಂಡೊಡನೆಯೇ ತಮಗೆ ಶಿಕ್ಷೆಯು ತಪ್ಪದೆಂದು ಅವರೆಲ್ಲರೂ ನಿರ್ಧರಿಸಿ ಕೊಂಡರು. ಪ್ರಾಣಿಶಾಲೆಯ ಉದ್ಯಾನದಲ್ಲಿ ಸಮ್ರಾಟನನ್ನು ಕಂಡಿದ್ದಾಗಿ ನಿಂದ ಅವರಿಗೆ ಮತ್ತೆ ಆತನ ಸಂದರ್ಶನವಾಗಿರಲಿಲ್ಲ. ಅವರು ಚಿತ್ರಗಳನ್ನು ತಡವಾಗಿ ಒಪ್ಪಿಸಿದುದಕ್ಕಾಗಿ ಆತನ ಕ್ಷಮೆಯನ್ನು ಬೇಡಿದರು. ಅವನು ಕೋಪವನ್ನಾಗಲಿ ಅಥವಾ ಹರ್ಷವನ್ನಾಗಲಿ ತೋರಿಸದೆ ಗಂಭೀರವಾದ ಧ್ವನಿಯಲ್ಲಿ "ತಡವಾಗಿ ಚಿತ್ರವನ್ನೊಪ್ಪಿಸಿರುವುದು ಮಾತ್ರವೇ ನಿಮ್ಮ ಅಪರಾಧವಲ್ಲ. ನೀವು ಬರೆದ ಚಿತ್ರಗಳನ್ನೂ ವಿಮರ್ಶೆ ಮಾಡಿ ನೋಡಿದ್ದೇನೆ. ಇದುವರೆಗೂ ನನ್ನಿಂದ ನ್ಯಾಯವು ದೊರೆಯಬೇಕೆಂದು ಬಯಸುತ್ತಿದ್ದಿರಿ. ಇವೊತ್ತು ನ್ಯಾಯವನ್ನು ದೊರೆಯಿಸುವುದಕ್ಕಾಗಿಯೇ ನಿಮ್ಮ ಅಪರಾಧಕ್ಕೆ ಶಿಕ್ಷೆ ವಿಧಿಸುತ್ತೇನೆ. ನಿಮ್ಮ ಚಿತ್ರಗಳು ಸಮರ್ಪಕವಾಗಿಲ್ಲ; ಆದರೂ ನಿಮ್ಮಲ್ಲಿ ನನಗೆ ಪ್ರೀತಿ ವಿಶ್ವಾಸಗಳುಂಟು. ಅದಕ್ಕಾಗಿ ನಿಮ್ಮೆಲ್ಲರ ತಲೆಗಳನ್ನೂ ಹಾರಿಸಿದ ಮೇಲೆ ನಿಮ್ಮಲ್ಲಿ ಒಬ್ಬೊಬ್ಬರ ಸವಿನೆನಪಿಗಾಗಿ ನಿಮ್ಮ ಒಂದೊಂದು ಅಂಗವನ್ನು ಚಿತ್ರಶಾಲೆಯಲ್ಲಿಡಿಸಿ ಅದರ ಕೆಳಗೆ ಇಂಥವರ ಅಂಗವೆಂದು ಬರೆಯಿಸಿಡುತ್ತೇನೆ" ಎಂದನು. ಶಿಕ್ಷೆಯನ್ನು ಕೇಳಿ ಅವರೆಲ್ಲರೂ ಭಯದಿಂದಲೂ, ಶೋಕದಿಂದಲೂ ವಿಹ್ವಲರಾದರು. ಒಂದೆರಡು ನಿಮಿಷಗಳ ಕಾಲ ಮಾತೇ ಹೊರಡಲಿಲ್ಲ. ಆ ಬಳಿಕ ಮನೋಹರನು, "ಚಿತ್ರಗಳನ್ನೊಪ್ಪಿಸಲು ತಡವಾಯಿತು. ಅಪರಾಧವನ್ನು ಒಪ್ಪಿಕೊಂಡವ ರನ್ನು ಮನ್ನಿಸಬೇಕು. ಸಣ್ಣ ಅಪರಾಧಕ್ಕಾಗಿ ಈ ಕ್ರೂರ ದಂಡನೆಯೇ? ಪ್ರೀತಿ ವಿಶ್ವಾಸಗಳಿದ್ದುದಕ್ಕೆ ಒಳ್ಳೆಯ ನಿದರ್ಶನ. ತಡವಾಗಿ ಚಿತ್ರಗಳನ್ನು ಒಪ್ಪಿಸಿದ ಅಪರಾಧವನ್ನೂ, ಇತರ ಅಪರಾಧಗಳನ್ನೂ ಮನ್ನಿಸಿ ಕಾಪಾಡ ಬೇಕು" ಎಂದು ಹೇಳಿ ಕೈಮುಗಿದನು. ಉಳಿದ ಮೂವರೂ ಅದೇ ರೀತಿ ಬೇಡಿಕೊಂಡರು. ಜಹಾಂಗೀರನು ನಕ್ಕು, ಚಿತ್ರವಿಮರ್ಶೆಯಲ್ಲಿ ನನಗೂ ಸ್ವಲ್ಪ ಪರಿಶ್ರಮವಿದೆ. ಚಿತ್ರಗಳೆಂದರೆ ನನಗೆ ಪ್ರಾಣ. ನನ್ನ ಮುಂದೆ ನೀವು ಯಾವ ಚಿತ್ರಗಳನ್ನು ಬೇಕಾದರೂ ತಂದಿಡಿ. ಅವುಗಳನ್ನು ಬರೆದವರು ಯಾರೆಂಬುದನ್ನು ನೀವು ತಿಳಿಸದಿದ್ದರೂ, ಅವು ಹಿಂದಿನವರು ಬರೆದ

ಚಿತ್ರಗಳೇ ಆಗಿರಲಿ ಅಥವಾ ಇಂದಿನವರು ಬರೆದ ಚಿತ್ರಗಳೇ ಆಗಿರಲಿ, ಇಂತಿಂತಹವರು ಈ ಈ ಚಿತ್ರವನ್ನು ಬರೆದಿದ್ದಾರೆಂದು ನಾನು ತಟಕ್ಕನೆ ತಿಳಿಸಬಲ್ಲೆ; ಒಂದು ಚಿತ್ರಪಟದಲ್ಲಿ ಹಲವರ ಮುಖಗಳು ಚಿತ್ರಿತವಾಗಿದ್ದು ಒಂದೊಂದು ಮುಖವನ್ನು ಒಬ್ಬೊಬ್ಬರು ಶ್ರೇಷ್ಠ ಚಿತ್ರಗಾರರು ಬರೆದಿದ್ದರೆ, ಅದನ್ನೂ ಒಡನೆಯೇ ನಿರ್ಧರಿಸಿ ಹೇಳಬಲ್ಲೆ; ಚಿತ್ರಪಟದಲ್ಲಿ ಒಬ್ಬರದೇ ಚಿತ್ರವಿದ್ದು, ಕಣ್ಣುಗಳನ್ನೊಬ್ಬರು, ಮೂಗನ್ನೊಬ್ಬರು, ಕಿವಿಗಳನ್ನೊಬ್ಬರು, ಹುಬ್ಬುಗಳನ್ನೊಬ್ಬರು ಬರೆದಿದ್ದರೆ, ರೇಖಾವಿನ್ಯಾಸಗಳನ್ನು ಒಂದು ಸಲ ನೋಡಿದ ಮಾತ್ರಕ್ಕೇ ಉತ್ತರಕ್ಷಣದಲ್ಲಿಯೇ ಅವುಗಳನ್ನು ಬರೆದವರ ಹೆಸರುಗಳನ್ನೆಲ್ಲಾ ಹೇಳಬಲ್ಲೆ. ಒಂದೊಂದು ಚಿತ್ರವನ್ನೂ ಒಬ್ಬೊಬ್ಬರೇ ಬರೆದು ಪೂರೈಸದೆ, ಕೆಲಕೆಲವು ಭಾಗಗಳನ್ನು ಕೆಲಕೆಲವರು ಬರೆದು ತೇಪೆ ತೇಪೆ ಮಾಡಿದ್ದೀರಿ ಇದು ಸರಿಯೆ? ಈ ಚಿತ್ರಗಳನ್ನು ಬರೆದುಕೊಟ್ಟುದಕ್ಕೆ ಸ್ಮಾರಕವಾಗಿ ನಾನು ಸೂಚಿಸಿದಂತೆ ನಿಮ್ಮಲ್ಲಿ ಪ್ರತಿಯೊಬ್ಬರ ಒಂದೊಂದು ಅಂಗವನ್ನೂ ಸೇರಿಸಿ ಚಿತ್ರಶಾಲೆಯಲ್ಲಿಡುವುದು ಉಚಿತವಾದ ಪುರಸ್ಕಾರವಲ್ಲವೆ?'' ಎಂದನು. ಮನೋಹರನೂ, ಪಾರ್ಸಿಸ್ಥಾನದ ಚಿತ್ರಗಾರನೂ ನಡೆದುದೆಲ್ಲವನ್ನೂ ತಿಳಿಸಿ ಮತ್ತೆ ಕ್ಷಮೆ ಬೇಡಿದರು. ಗೋವರ್ಧನನು ''ಅವರಿಬ್ಬರೂ ಅಪೂರ್ಣವಾಗಿ ಬಿಟ್ಟಿದ್ದ ಚಿತ್ರಗಳನ್ನೇನೋ ನಾವಿಬ್ಬರೂ ಪೂರೈಸಿದೆವು. ಆದರೆ ನಾವಿಬ್ಬರು ಬರೆದ ಚಿತ್ರಗಳನ್ನು ಕೂಡ ಪ್ರತ್ಯೇಕ ಪ್ರತ್ಯೇಕವಾಗಿ ಬರೆಯಲಿಲ್ಲ. ನಾಲ್ಕು ಮಂದಿಗಳು ಬರೆಯಬೇಕಾಗಿದ್ದ ಚಿತ್ರಗಳನ್ನು ಇಬ್ಬರೇ ಬರೆಯಬೇಕಾಯಿತು. ಆ ಆತಂಕದ ಆತುರದಲ್ಲಿ ಒಂದು ಕ್ಷಣವನ್ನೂ ವ್ಯರ್ಥಮಾಡದೆ ಚಿತ್ರಗಳನ್ನು ಬರೆದೆವು. ನಾನು ಎದ್ದು ಹೋಗಿದ್ದಾಗ ನನ್ನ ಭಾಗದ ಚಿತ್ರಗಳ ಕೆಲಸವನ್ನೂ ಅಬುಲ್ ಹಸನ್ ಮಾಡುತ್ತಿದ್ದರು. ಅವರು ಊಟಕ್ಕೆ ಹೋಗಿದ್ದರೆ ಅವರು ಬರುವವರೆಗೆ ಅವರ ಭಾಗದ ಚಿತ್ರಗಳ ಕೆಲಸವನ್ನೂ ನಾನು ಮಾಡುತ್ತಿದ್ದೆ. ಚಿತ್ರಗಳಲ್ಲಿ ಏಕಮುಖವಾದ ಕೈವಾಡವಿಲ್ಲದಿರುವುದು ನಿಜ. ಇದನ್ನು ಕಂಡುಹಿಡಿದ ತಮ್ಮ ಚಿತ್ರವಿಮರ್ಶೆ ಅದ್ಭುತವಾಗಿದೆ. ನಮ್ಮ ತಪ್ಪಿಗಾಗಿ ನಮ್ಮನ್ನು ಮನ್ನಿಸಬೇಕು'' ಎಂದನು. ಜಹಾಂಗೀರನು ''ಈ ಅಪರಾಧವನ್ನು ನೀವು

ಗಳು ಮಾಡಿರುವುದೂ ಇದೇ ಮೊದಲನೆಯ ಸಲವಲ್ಲ. ಪ್ರಾಣಿ ಚಿತ್ರಗಳನ್ನು ಬರೆದಾಗಲೂ ನೀವುಗಳು ಮಾಡಬೇಕಾದ ಕೆಲಸವನ್ನು ಇತರರಿಂದ ಮಾಡಿ ಸಿದ್ದೀರಿ. ಆದುದರಿಂದ, ಆಪರಾಧಕ್ಕೆ ಶಿಕ್ಷೆಯಾಗಲೇಬೇಕು.'' ಎಂದು ಕಣ್ಸನ್ನೆ ಮಾಡಿದನು. ನಾಲ್ವರು ಚಿತ್ರಗಾರರೂ ಒರೆಹಿರಿದ ಕತ್ತಿಗಳನ್ನು ಧರಿಸಿದ ಕೊಲೆಗಡುಕರನ್ನು ನಿರೀಕ್ಷಿಸುತ್ತ ತಲೆತಗ್ಗಿಸಿ ವ್ಯಸನಾಕ್ರಾಂತ ರಾಗಿಯೂ, ವಿಚಾರಶೂನ್ಯರಾಗಿಯೂ, ಕುಳಿತಿದ್ದರು. ಸಮ್ರಾಟನ ಸೇವಕರು ಅವರವರ ಬಳಿಯಲ್ಲಿ ಅವರವರಿಗೆ ಸಲ್ಲಬೇಕೆಂದು ಅವನು ಅಪ್ಪಣೆ ಮಾಡಿದ್ದ ಹಣದ ಚೀಲಗಳನ್ನು ತಂದಿಟ್ಟರು. ನಾಲ್ವರು ಚಿತ್ರಗಾರರೂ ತಮ್ಮ ಕಣ್ಣುಗಳನ್ನು ತಾವೇ ನಂಬಲಾರದೆ ಆಶ್ಚರ್ಯಪಡುತ್ತಿರುವಲ್ಲಿ, ಜಹಾಂಗೀರನು ನಕ್ಕು, ''ಪೂಜ್ಯರಾದ ನಮ್ಮ ತಂದೆಯವರು ಆಡಿದ್ದ ಅಮೋಘವಾಣಿಗಳು ನಿಮ್ಮ ಅನುಭವಕ್ಕೆ ಬರುವಂತೆ ಮಾಡುವುದಕ್ಕಾಗಿ ಮಾತ್ರವೇ ನೀವು ಪ್ರಾಣಿಗಳ ಚಿತ್ರಗಳನ್ನು ಬರೆಯುವಂತೆ ನಾನು ಅಪ್ಪಣೆ ಮಾಡಿದೆ. ಅವರು ''ಚಿತ್ರಗಾರರನ್ನು ಕಂಡರೆ ಕೆಲವರು ದ್ವೇಷಿಸುತ್ತಾರೆ. ಅಂಥವರಲ್ಲಿ ನನಗೆ ಆದರವಿಲ್ಲ. ಚಿತ್ರಗಾರರದು ಶ್ರೇಷ್ಠವೃತ್ತಿ. ಭಗವಂತನ ಮಹಿಮೆಯ ಸಾಕ್ಷಾತ್ಕಾರಕ್ಕೆ ಅವರಿಗೆ ಉತ್ತಮವಾದ ಅವಕಾಶವಿದೆ. ಭಗವಂತನ ಪವಿತ್ರ ಸೃಷ್ಟಿಗೆ ಸೇರಿದ ಪ್ರಾಣಿಗಳ ಅಂಗವೈಖರಿಯನ್ನು ನೋಡಿ ನೋಡಿ ಅವು ಗಳನ್ನು ಚಿತ್ರಿಸಿದ ಹಾಗೆಲ್ಲಾ ಭಗವಂತನ ಸೃಷ್ಟಿ ವೈಖರಿಯು ಅನಂತ ವೈವಿಧ್ಯಗಳಿಂದ ಕೂಡಿದೆಯೆಂಬುದನ್ನು ಚಿತ್ರಗಾರರು ಮನಗಾಣುತ್ತಾರೆ. ಭಗವಂತನ ಮಹಿಮೆಯು ಅವರಿಗೆ ಮನಮುಟ್ಟಿ ಗೋಚರವಾಗುತ್ತದೆ'' ಎಂದು ಹೇಳಿದ್ದರು. ಅದರ ಅನುಭವವು ನಿಮಗೂ ಆಗಲೆಂದು ನಾನು ಹಾಗೆ ಅಪ್ಪಣೆ ಮಾಡಿದೆ. ನೀವು ಕೆಲವು ಚಿತ್ರಗಳನ್ನು ಬಹಳ ಚೆನ್ನಾಗಿ ಬರೆದಿರಿ. ಅದಕ್ಕಾಗಿ ಈ ಬಹುಮಾನ. ಕೆಲವು ಚಿತ್ರಗಳನ್ನು ಇತರರಿಗೆ ವಹಿಸಿದಿರಿ; ಅವು ಚೆನ್ನಾಗಿಲ್ಲ. ಕೆಲವನ್ನು ಬರೆದಾಗ ಪ್ರಾಣಿಗಳನ್ನೇ ಚೆನ್ನಾಗಿ ಪರಿಶೀಲಿಸದೆ ಬರೆದಿದ್ದೀರಿ. ಪಾರ್ಸಿಸ್ಥಾನದ ನಮ್ಮ ಚಿತ್ರಗಾರರು ಗೂಬೆಯ ಚಿತ್ರದಲ್ಲಿ ಅದರ ಕಣ್ಣಿನಲ್ಲಿ ನೀಲಿಯ ಹಾಲೆಯನ್ನು ಚಿತ್ರಿ ಸಿದ್ದಾರೆ; ಅದನ್ನು ಅಚ್ಚ ಹಳದಿ ಬಣ್ಣದಲ್ಲಿ ಚಿತ್ರಿಸಬೇಕು. ಗೋವರ್ಧನ್

ಬರೆದಿರುವ ಕತ್ತೆಯ ಚಿತ್ರವು ಅಮೋಘವಾಗಿದೆ. ನಿಮ್ಮಲ್ಲಿ ಇತರರೂ ಅದರ ಚಿತ್ರವನ್ನು ಬರೆದಿದ್ದೀರಿ. ಆದರೆ ಅದರ ಕಣ್ಣುಗಳ ಸುತ್ತಲೂ ಕಪ್ಪು ಗೆರೆಯು ಇರುವುದು ಆ ಕತ್ತೆಯ ವೈಶಿಷ್ಟ್ಯ. ಗೋವರ್ಧನ್ ಮಾತ್ರ ಅದನ್ನು ಗಮನಿಸಿ ಚಿತ್ರದಲ್ಲಿ ತಂದಿದ್ದಾರೆ. ಉಳಿದವರು ಅದನ್ನು ಗಮನಿಸಿಯೇ ಇಲ್ಲ. ಗೋವರ್ಧನ್ ಅವರಿಗೇ ಅತ್ಯಂತ ಹೆಚ್ಚಿನ ಸಂಭಾವನೆಯನ್ನು ಕೊಟ್ಟಿದ್ದೇನೆ. ಈ ಸಲ ಹಡಗು ಹೇಗೂ ಹೊರಟುಹೋಯಿತು. ಆತುರವಿಲ್ಲದೆ ಸಾವಧಾನವಾಗಿ ಮತ್ತೆ ಒಬ್ಬೊಬ್ಬರೇ ಒಂದೊಂದು ಚಿತ್ರಪಟದಂತೆ ಬರೆಯಿರಿ. ಮುಂದಿನ ಸಾರಿ ಕಳುಹಿಸಿದರಾಯಿತು'' ಎಂದನು. ಚಿತ್ರಗಾರರು ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಚಿತ್ರಗಳನ್ನು ಬರೆಯುವವರೇ ಚಿತ್ರದ ಪ್ರತಿಮೆಗಳಂತೆ ಇದ್ದರು.

# ಗೋಗ್ರಾಸ

ನಾರಾಯಣ ಶಾಸ್ತ್ರಿಗಳ ಮನೆಯೆಂದರೆ ಅದೊಂದು ಸರಸ್ವತೀ ಪ್ರಾಸಾದ. ಅಲ್ಲಿ ನಿಲ್ಲಲಾರದೆ ಲಕ್ಷ್ಮಿಯು ಎಂದೋ ಓಡಿಹೋಗಿದ್ದಳು. ಆದರೂ ಪರಿತುಷ್ಟವಾದ ಅವರ ಮನಸ್ಸು ಅದರಿಂದ ಆತಂಕಪಟ್ಟಿರಲೇ ಇಲ್ಲ.

ಶಾಸ್ತ್ರಿಗಳು ಆಲೋಚನಾಮಗ್ನರಾದಾಗ ಸ್ವಲ್ಪ ಗಟ್ಟಿಯಾಗಿ ಮಾತ ನಾಡಿಕೊಳ್ಳುವುದು ಅವರ ವಾಡಿಕೆ. ಅಂತಹವರು ಬಹು ಮಂದಿ ಈಗಲೂ ಇದ್ದಾರೆ; ಆದಕಾರಣ ಯಾರೂ ಇದನ್ನು ಸುಳ್ಳೆನ್ನಬೇಕಾದುದಿಲ್ಲ. ಒಂದು ದಿನ ನಾರಾಯಣ ಶಾಸ್ತ್ರಿಗಳು ತಮ್ಮ ಕೊಟಡಿಯಲ್ಲಿ ಕುಳಿತು ಕೊಂಡು, ಆಲೋಚನಾಮಗ್ನರಾಗಿ, "ತೂಲರಾಶಾವಿವಾಗ್ನೇಃ.............. ಪುಷ್ಪರಾಶಾವಿವಾಗ್ನೇಃ............ಒಂದು ಪ್ರಯೋಗ ಹತ್ತಿಯ ರಾಶಿಗೆ ಬೆಂಕಿ ಬಿದ್ದಂತೆ—ಎಂದು. ಇನ್ನೊಂದು ಪ್ರಯೋಗ ಹೂವಿನ ರಾಶಿಗೆ ಬೆಂಕಿ ಬಿದ್ದಂತೆ—ಎಂದು. ಜಿಂಕೆಯ ಮೈಗೆ ಬಾಣ ಹೊಡೆದರೆ ಹೀಗೆ ಎಂಬ ವರ್ಣನೆಗೆ ಇವೆರಡು ಪ್ರಯೋಗಗಳಲ್ಲಿ ಯಾವುದು ಸರಿ........ಯಾವುದು ಸರಿ........ಎರಡನೆಯದೇ ಸೊಗಸು" ಎಂದು ಹೇಳಿಕೊಳ್ಳುತ್ತಿದ್ದರು.

ಅವರಿಗೆ ಮೊದಲೇ ಕೂಡುಹುಬ್ಬು. ಅವರು ಆಲೋಚನಾಮಗ್ನ ರಾಗಿದ್ದ ಕಾರಣ, ಗಂಟಿಟ್ಟ ಕೂಡುಹುಬ್ಬು ಮತ್ತಷ್ಟು ಕೂಡಿಕೊಂಡಿದೆ. ಶಾಸ್ತ್ರಿಗಳು ಪದ್ಮಾಸನ ಹಾಕಿಕೊಂಡು ಮಂದಲಿಗೆಯ ಮೇಲೆ ಕುಳಿತಿದ್ದಾರೆ. ಅಂಗೈಯಲ್ಲಿದ್ದ ನಸ್ಯವೆಲ್ಲ ಪಂಚೆಯ ಮೇಲೆ ಸುರಿದುಹೋಗಿದ್ದರೂ, ಶಾಸ್ತ್ರಿಗಳು ಹೊರಗಿನ ಪ್ರಪಂಚದ ಪರಿಜ್ಞಾನವೇ ಇಲ್ಲದೆ, ಉಂಡೆ ನಸ್ಯವು

ಅಂಗೈಯನ್ನು ಸೇರಿದಾಗ ತಿಕ್ಕಲಾರಂಭಿಸಿದಂತೆಯೇ ಇನ್ನೂ ತಿಕ್ಕುತ್ತಿದ್ದಾರೆ.

ನಸ್ಯವು ಪುಡಿಯಾದಮೇಲೂ ಅದೇ ರಭಸದಿಂದ ಅವರು ತಿಕ್ಕಿದ ಕಾರಣ, ಅದು ಅಂಗೈಯಲ್ಲಿ ನಿಲ್ಲದೆ ಪಂಚೆಯ ಮೇಲೆಲ್ಲಾ ಚೆಲ್ಲಿಹೋಗಿದೆ. ಇನ್ನು ಸ್ವಲ್ಪಹೊತ್ತಿಗೆ ಮುಳುಗುವುದರಲ್ಲಿದ್ದ ಸೂರ್ಯನ ಬಿಸಿಲು, ಕಿಟಕಿಯಿಂದ ಬಂದು ಗೋಡೆಯ ಮೇಲೆ ಬಿದ್ದಿದೆ.

ಆ ವೇಳೆಗೆ ಕಾಮಾಕ್ಷಮ್ಮನವರು ಶಾಸ್ತ್ರಿಗಳ ಬಳಿಗೆ ಬಂದು ಆತಂಕ ಪೂರಿತವಾದ ಮುಗುಳುನಗೆಯಿಂದ ಕೂಡಿ "ಆ ಮಹಾರಾಯ ಕಾಳಿದಾಸ ಬದುಕಿದ್ದಿದ್ದರೆ ನಾನಾದರೂ ಹೋಗಿ ಅವನಿಗೊಂದು ಬುದ್ಧಿ ಮಾತು ಹೇಳುತ್ತಿದ್ದೆ ನೋಡಿ" ಎಂದರು. ನಾರಾಯಣ ಶಾಸ್ತ್ರಿಗಳು ಸ್ವಲ್ಪ "ಬೆಚ್ಚಿಬಿದ್ದು" ಹೊರಗಿನ ಪ್ರಪಂಚಕ್ಕೆ ಬಂದು "ಏನೆಂದೆ?" ಎಂದರು.

ಕಾಮಾಕ್ಷಮ್ಮನವರು :—"ಸರಿಹೋಯಿತು. ನಿಮ್ಮನ್ನ ನೋಡಿ ಸಂಕಟವಾಗುತ್ತೆ. ಹುಚ್ಚೆಲ್ಲಿ ಹಿಡಿಯುತ್ತೋ—ಅಂತ ಎದೆ ಗುಂಡಿಗೆ ಡಬಾ ಡಬಾ ಅಂತಿದೆ. ಶಿಷ್ಯರಿಗೆ ಪಾಠ ಹೇಳಿದಿರಿ. ಆಗಲೇ ಇದೆಲ್ಲಾ ಆಡಿ ಮುಗಿಸಿದಿರಿ. ಈಗತಾನೆ ಊಟಮಾಡಿ ಬಂದಿದ್ದೀರಿ ..........

ನಾರಾಯಣಶಾಸ್ತ್ರಿ : — (ಸ್ವಲ್ಪ ನಕ್ಕು) "ಹೀಗೇನು! ದೇವತಾರ್ಚನೆಯಾದ ಮೇಲೆ ಊಟ ಮಾಡದೆ ಪಾಠ ಹೇಳೋದಕ್ಕೆ ಪ್ರಾರಂಭಿಸಿದೇ ಅಂತ ನನ್ನ ಮೇಲೆ ಕೋಗೀರೋ? ಸರಿ, ಸರಿ........ನನ್ನಿಂದ ನಿನಗೆ ಊಟ ಹೊತ್ತಾದ್ದು ನಿಜ. ಆದರೆ ನಾನು ಮನೆಗೆ ಬಂದದ್ದು ಹೊತ್ತಾಯಿತು. ದೇವತಾರ್ಚನೆ ಮುಗಿಯುವ ವೇಳೆಗೆ ಹುಡುಗರು ಬಂದರು. ಸರಸ್ವತಿಯ ಸೇವೆಗೆ ನನ್ನ ಹೊಟ್ಟೆಯು ಅಡ್ಡಿಯಾಗಬಾರದೆಂದು ಪಾಠ ಹೇಳಿ ಮುಗಿಸಿದೆ. ಇದರಿಂದ ನಿನ್ನ ಊಟಕ್ಕೆ ಹೊತ್ತಾಯಿತೆಂತಲೋ ನಿನ್ನ ಆಕ್ಷೇಪಣೆ. ಆ ಮಹಾತಾಯಿ ಸೇವೆಯಿಂದ ಬರುವ ಪುಣ್ಯದಲ್ಲಿ ನಿನಗೂ ಅರ್ಧಭಾಗ ಇದ್ದೇ ಇದೆ."

ಕಾಮಾಕ್ಷಮ್ಮನವರು :— ನಿಮ್ಮನ್ನ ನಾನು ಆಕ್ಷೇಪಣೆ ಮಾಡಲಿಲ್ಲ. ಪಾಠ ಹೇಳ್ತಾ ಹೇಳ್ತಾ, ಅದೇನೋ ನಖಲು, ನಖಲುವೋ, ಗಿಖಲು

ಗಿಬಿಟುವೋ ಎಂದುಕೊಂಡು ಎದ್ದು ನಿಂತೇಬಿಟ್ಟಿರಿ. ಅದೇನು ಆವೇಶ, ಅದೇನು ಮೈಗೂರಾಡಿಕೊಳ್ಳೋದು, ಮನೆ ಕಿತ್ತುಹೋಗುವ ಹಾಗೆ ಅದೇನು ಕೂಗಾಟದ ರಭಸ, ರಾಮಾ, ರಾಮಾ, ದೇವರೇ ಗತಿ! ಮಾಧ್ಯಾಹ್ನಿಕಕ್ಕೆ ಮುಂಚೆಯೇ ಹಸಿವು ಎಂದಿದ್ದಿರಿ. ನಿಮ್ಮ ಆರ್ಭಟ ನೋಡಿದರೆ ಹಸಿದವರ ಹಾಗಿರಲೇ ಇಲ್ಲ.''

ನಾರಾಯಣ ಶಾಸ್ತ್ರಿಗಳು :— ''ಕಾವ್ಯದ ರಸ ಹಾಗಿದೆ. ಇದರ ಮೇಲೆ ನಾನು ನಾಟ್ಯಶಾಸ್ತ್ರಕ್ಕೂ ಮಣ್ಣು ಹಾಕಿದವನು. ಅಷ್ಟೇ ಅಲ್ಲ. ನಾಟಕ ಪಾಠ ಹೇಳೋವಾಗ ನನಗೆ ಮೈಮರೆತುಹೋಗುವುದೇ ವಾಡಿಕೆ. ಅದರಲ್ಲೂ ಕಾಳಿದಾಸನ ನಾಟಕ. ಕೇಳಬೇಕೆ? ಏನು ಮಾಡಲಿ, ಹೇಳು. ನೀನೂ ಅದೇನೋ ಹೇಳಿದೆ ನೋಡು. ಆ ಮಹಾರಾಯ ಕಾಳಿದಾಸ ಬದುಕಿದ್ದರೆ........ಅಂತ. ನೀನು ಅದೇನೋ ಹೇಳಿದೆ, ...........ಕಾವ್ಯದ ಹುಚ್ಚೇ ಹಾಗೆ.''

ಕಾಮಾಕ್ಷಮ್ಮನವರು :– ''ನಾನು ಭಯಪಟ್ಟದ್ದು ನಿಮ್ಮ ಬಾಯಲ್ಲೇ ಬಂತು. ನಾನು ಹೇಳಿದ್ದೂ ಅದೇ. ಸದ್ಯ ನಿಮಗೆಲ್ಲಿ ಹುಚ್ಚು ಹಿಡೀದೀತೋ ಅಂತ. ಅವನು ಬದುಕಿದ್ದರೆ 'ಮಹಾರಾಯಾ! ನಿನ್ನ ಪುಸ್ತಕಗಳೆಲ್ಲಾ ನೀನೇ ಹಿಂದಕ್ಕೆ ತೆಗೆದುಕೊಂಡು ಹೋಗಿ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕಿಟ್ಟು ಕೊಂಡು ನಮ್ಮ ಮನೆಯವರ ಬುದ್ಧಿ ನೆಟ್ಟಗಿರುವ ಹಾಗೆ ಮಾಡಪ್ಪಾ, ನಿನ್ನ ದಮ್ಮಯ್ಯ' ಅಂತ ಬೇಡಿಕೊಳ್ಳುತ್ತಿದ್ದೆ. ನೀವು ಹಗಲು ಕನವರಿಕೆ ಮಾತ ನಾಡಿದ್ದೇನು! ನಶ್ಯವೆಲ್ಲಾ ಮೈಮೇಲೆ ಚೆಲ್ಲಿಕೊಂಡಿರುವುದೇನು! ಈ ರಗಳೆಯೂ ಉಂಟೆ?''

ನಾರಾಯಣ ಶಾಸ್ತ್ರಿಗಳು ನಶ್ಯವನ್ನು ತಾವು ಪಂಚೆಯ ಮೇಲೆ ಸುರಿದುಕೊಂಡಿದ್ದುದನ್ನು, ಆಗ ನೋಡಿಕೊಂಡರು. ಪ್ರಪಂಚದ ದೃಷ್ಟಿ ಯಲ್ಲಿ ಅವಿವೇಕವೆನ್ನಿಸುವ ಆ ಕೆಲಸವನ್ನು ನೆನೆದು ಅವರೇ ನಕ್ಕರು. ಆದರೂ ಸೋಲನ್ನೊಪ್ಪಿಕೊಳ್ಳಲು ಮನಸ್ಸಿಲ್ಲದವರಂತೆ ''ಅದರ ಸೊಗಸು ನಿನಗೇನು ಗೊತ್ತು? ದುಷ್ಯಂತನ ಬಾಣ ಜಿಂಕೆಯ ಮೇಲೆ ಬೀಳುವು ದೆಂದರೆ ಹೂವಿನ ರಾಶಿಗೆ ಬೆಂಕಿ ಬಿದ್ದಹಾಗೆಂತ ಒಂದು ಪ್ರಯೋಗ.

ಹತ್ತಿಯ ರಾಶಿಗೆ ಬೆಂಕಿ ಬಿದ್ದಹಾಗೆಂತ ಇನ್ನೊಂದು ಪ್ರಯೋಗ. ಇವೆರಡ ರಲ್ಲಿ ಯಾವುದು ಸರಿಯೆಂತ ಯೋಚಿಸುತ್ತಿದ್ದೆ. ಅಷ್ಟರಲ್ಲಿ ನೀನು ಬಂದೆ'' ಎಂದರು.

ಕಾಮಾಕ್ಷಮ್ಮನವರು :— ''ಶಿಷ್ಯರಿಗೆ ಆಗಲೇ ಇದೆಲ್ಲ ಹೇಳಿದಿರಲ್ಲ, ಇನ್ನೇಕೆ ಈ ಮಾತು ? ಅವೆರಡೂ ಸರಿಯೆಂದರಾಯಿತು. ದುಷ್ಯಂತನ ಬಾಣ ಹೇಗಾದರೂ ಇರಲಿ. ಹತ್ತಿ ರಾಶಿಗಾದರೂ ಬೆಂಕಿ ಬೀಳಲಿ. ಹೂವಿನ ರಾಶಿಗಾದರೂ ಬೆಂಕಿ ಬೀಳಲಿ. ಇನ್ನೇನು ಹಸುಗಳು ಬರುವ ಹೊತ್ತಾ ಯಿತು. ಅವಕ್ಕೆ ಹುಲ್ಲಿಲ್ಲ. ಅವುಗಳ ಹೊಟ್ಟೆಗೆ ಬೆಂಕಿ ಬಿದ್ದಂತಾಗುವ ಈ ಹಸಿವಿನ ಬಾಣಕ್ಕೆ ಉತ್ತರ ಹೇಳಿ.''

ನಾರಾಯಣ ಶಾಸ್ತ್ರಿಗಳು :— ನೀನೂ ಕವಿಯಾಗಿಬಿಟ್ಟೆಯಲ್ಲೇ........ ಬೆಳಗ್ಗೆಯೇ ನಾನು ಹುಲ್ಲಿಗೆ ಹೇಳಿದ್ದೆ. ಹೋಗಿಯೂ ಬಂದೆ. ಹುಲ್ಲು ಬರಬೇಕಾಗಿತ್ತಲ್ಲ........ನೀನು ಗೋಗ್ರಾಸಕ್ಕೆ ಕಲ್ಲು ಹಾಕೀಯಾ! ಇನ್ನೂ ಒಂದೆರಡು ದಿನಕ್ಕೆ ನಿನ್ನ ಪದ್ಧತಿಯಂತೆ ನೀನೂ ಗ್ರಾಸ ಇಟ್ಟಿರಬೇಕು. ಮುಂಚೆ ಮುಂಚೆಯೇ ನನಗೆ ಹೇಳಿ ಅವಾಂತರ ಮಾಡುವುದೇ ತಾನೇ ನಿನ್ನ ಪದ್ಧತಿ ! ''

ಕಾಮಾಕ್ಷಮ್ಮನವರು :— (ನಗುತ್ತ) ''ಒಪ್ಪವಾಗಿ ಸಂಸಾರ ಮಾಡುವ ನನ್ನಂಥಾವಳು ನಿಮಗೆ ಸಿಕ್ಕಬಾರದಾಗಿತ್ತು. ಸರಿಯಾದ ಹೆಂಡತಿ ಸಿಕ್ಕ ಬೇಕಾಗಿತ್ತು. ನಾನು ಎಷ್ಟು ಸವರಿಸಿದರೂ ಅದಕ್ಕೆ ಬೆಲೆಯಿಲ್ಲ. ಮೂರು ದಿನಗಳಿಂದ ಹೇಳಿ ಹೇಳಿ ಸಾಕಾದೆ. ಕೊನೆಗೆ ಇವೊತ್ತು ಬೆಳಗ್ಗೆ ರಥ ಹೊರಟಿತು. ಹೋಗಿಬಂದಿರಿ ; ಹುಲ್ಲೇನೋ ಬರಲಿಲ್ಲ. ಸ್ವಲ್ಪ ಹುಲ್ಲಿತ್ತು ; ಕರುಗಳಿಗೆ ಹಾಕಿದೆ. ಒಂದು ಕಡ್ಡಿ ಹುಲ್ಲೂ ಉಳಿದಿಲ್ಲ.''

ನಾರಾಯಣ ಶಾಸ್ತ್ರಿಗಳು :— ''ಇನ್ನೇನು ಗತಿ ? ನಾವು ಪೂರ್ಣ ಗ್ರಾಸ ಕತ್ತರಿಸಿದೆವು. ಗೋವುಗಳಿಗೆ ಗ್ರಾಸವಿಲ್ಲವಲ್ಲಾ !........ಹೋಗಲಿ, ಒಂದು ಕೆಲಸ ಮಾಡು. ಹೇಗೂ ಈಗ ತಾನೆ ಊಟ ಮಾಡಿದ್ದೇವೆ. ರಾತ್ರಿ ಊಟವೇ ಬೇಡ. ಅನ್ನ ಕಲಸಿ ಅವಕ್ಕೇ ಇಟ್ಟುಬಿಡು.''

ಕಾಮಾಕ್ಷಮ್ಮನವರು :— "ವಿದ್ಯಾವಂತರಾದವಷ್ಟೂ ಸಂಸಾರದ ಹೂಟವೇ ತಿಳಿಯದೆಹೋಗುತ್ತೋ ಏನೊ! ನಮ್ಮಿಬ್ಬರ ಊಟ ಮೂವತ್ತೆರಡು ಹಸುಗಳಿಗೆ ಸಾಕೆ?"

ನಾರಾಯಣ ಶಾಸ್ತ್ರಿಗಳು :— "ಮನೆಯಲ್ಲಿರುವ ಅಕ್ಕಿ ಜೋಳಿಯನ್ನೆಲ್ಲ ಇಟ್ಟುಬಿಡು."

ಕಾಮಾಕ್ಷಮ್ಮನವರು :— "ಅದೂ ಸಾಕಾದಷ್ಟಿಲ್ಲ. ಅಲ್ಲದೆ ಅವಕ್ಕೆ ಹುಲ್ಲು ಸೊಗಸುವಮುಟ್ಟಿಗೆ ಅಕ್ಕಿ ಜೋಳಿ ಸೊಗಸೀತೆ? ಹೊಟ್ಟೆ ನೋವೇನಾದರೂ ಬಂದರೆ ಗತಿಯೇನು? ಅವೂ ನಮ್ಮಂತೆಯೇ ಪ್ರಾಣಿಗಳು."

ನಾರಾಯಣ ಶಾಸ್ತ್ರಿಗಳು:— "ಮುಂದೆ ಗತಿಯೇನೋ ತಿಳಿಯದು. ಭಗವಂತ! ಗೋಗ್ರಾಸಕ್ಕೆ ಅನುಕೂಲವಿಲ್ಲದೆ ಎಂಥಾ ಕಷ್ಟ ಬಂತು! ಈ ಸಲ ಬೆಳೆ ಚೆನ್ನಾಗಿ ಆಗದೆ ಈ ಕಷ್ಟ ಬಂತು. ಹುಲ್ಲಿಲ್ಲದೆ ಹೋಯಿತು."

ಕಾಮಾಕ್ಷಮ್ಮನವರು :— "ನಾನು ಮೊದಲಿನಿಂದಲೂ ಹೇಳ್ತಾಲೇ ಬಂದೆ. ನಾವಿರುವವರು ಇಬ್ಬರೇ ಇಬ್ಬರು. ಒಂದು ಹಸು ಅಥವಾ ಎರಡು ಹಸು ಇದ್ದರೆ ಸಾಕಾಗಿತ್ತು. ನಮ್ಮ ಹೊಲಗಳ ಹುಲ್ಲೇ ಸಾಕಾಗಿ ಅಮೃತದ ಹಾಗೆ ಹಾಲು ದೊರೀತಾ ಇತ್ತು. ಮೂವತ್ತೆರಡು ಹಸುಗಳನ್ನು ಕೊರಳಿಗೆ ಕಟ್ಟಿಕೊಂಡು ಪಾಡು ಪಡಬೇಕಾಗಿದೆ. ಹುಲ್ಲಿನ ಭಿಕ್ಷ ಬೇಡಿ ಬೇಡಿ ಗೋಳಾಡಬೇಕಾಗಿದೆ."

ನಾರಾಯಣ ಶಾಸ್ತ್ರಿಗಳು :— "ಸಾರ್ಥಕವಾಯಿತು. ನೀನೂ ಚೆನ್ನಾಗಿಯೇ ಹೇಳಿದೆ. ನಾನು ಮತ್ತು ನನ್ನ ಕಣ್ಣಿನ ಪಾಪೆ ಅಂತ ನಮ್ಮಿಬ್ಬರ ಪಾಡುನೋಡಿಕೊಂಡರೆ ಅಲ್ಲಿಗೇ ಪುರುಷಾರ್ಥಸಿದ್ಧಿಯೇ, ಹೇಳು. ಒಂದುಸಲ ಬೆಳೆ ಕೆಟ್ಟುಹೋದ್ದಕ್ಕೆ ಹಸುಗಳನ್ನೆಲ್ಲಾ ಅಟ್ಟಬಿಡಬೇಕಾಗಿತ್ತೆ? ಮೊದಲು ಯಾವ ಹಸು ಆರಿಸಿ ಅಟ್ಟಬೇಕಾಗಿತ್ತೋ ಕಾಣೆ. ಯಾವ ಜನ್ಮದಲ್ಲಿ ಮಾಡಿದ ಸುಕೃತದಿಂದಲೋ ಈ ಜನ್ಮದಲ್ಲಿ ಎರಡಕ್ಷರ ಬಂದಿದೆ. ನಾವು ಮೂವತ್ತೆರಡು ಹಸು ಕಟ್ಟದಿದ್ದರೆ ವಿದ್ಯಾರ್ಥಿಗಳಿಗೆ ನೊರೆಹಾಲು ಕೊಡಲು ಸಾಧ್ಯವಾಗುತ್ತಿದ್ದ ಬಗೆ?"

ಕಾಮಾಕ್ಷಮ್ಮನವರು :— "ಅವರಿಗೆ ಅನ್ನ ಹಾಕುವ ಶಕ್ತಿಯಾದರೂ ಇದ್ದಿದ್ದರೆ ಆ ಮಾತು ಬೇರೆ. ಪರಸ್ಥಳದವರ ಮಾತು ಹಾಗಿರಲಿ. ಸ್ಥಳದವರು, ಪರಸ್ಥಳದವರು, ಎಲ್ಲರನ್ನೂ ಕುರೀ ಮಂದೆ ಹಾಗೆ ಸೇರಿಸಿ ಎರಡು ಹೊತ್ತೂ ನೊರೆಹಾಲು ಕುಡಿಸಿ ಹುಯ್ಲು ಹತ್ತದೇ ಹೋಗಿದ್ದರೆ ಯಾವ ಚಿನ್ನದ ಕಲಶ ಮುರಿದುಹೋಗುತ್ತಿತ್ತೋ ಕಾಣೆ!"

ನಾರಾಯಣ ಶಾಸ್ತ್ರಿಗಳು :— "ವಿದ್ಯಾದಾನ ಮಾಡಬೇಕು. ಅದರಿಂದ ಜನ್ಮವೇ ಸಾರ್ಥಕ."

ಕಾಮಾಕ್ಷಮ್ಮನವರು :— (ನಗುತ್ತ) "ದೇವರು ದೊಡ್ಡ ಗಂಟಲು ಕೊಟ್ಟಿದ್ದಾನೆ. ಅದು ಬೇಕಾದಷ್ಟು ಸಾಗಲಿ. ಎಷ್ಟು ಬೇಕಾದರೂ ಒರಲು ಸಂತೆ ಹಾಕಿಸಿ. ಆದರೆ ಈ ನೊರೆಹಾಲು ಸಂತರ್ಪಣೆ ಯಾವ ದೇವರಿಗೆ ಪ್ರೀತಿಯೋ ಕಾಣೆ!"

ನಾರಾಯಣ ಶಾಸ್ತ್ರಿಗಳು :— "ಅದೂ ವಿದ್ಯಾದಾನದ ಅಂಗವೇ. ಪಾಪ! ಹುಡುಗರು. ಅವರ ಬೆನ್ನೂ ಕಣ್ಣೂ ತಣ್ಣಗಿಡಬೇಕು ನೋಡು. ಅವರು ನೊರೆಹಾಲು ಕುಡಿದು ಸಡಗರಪಟ್ಟು ಹಾಲುನೊರೆ ನಗು ನಕ್ಕಾಗ ದೇವಲೋಕದಲ್ಲಿ ಹುಡುಗರಿದ್ದಾರೋ ಇಲ್ಲವೋ ಅಂತ ಯೋಚನೆ ಹುಟ್ಟುತ್ತೆ ನನಗೆ. ನಾನೇನಾದರೂ ಅಲ್ಲಿಗೆ ಹೋದರೆ ಅಲ್ಲಿ ಹುಡುಗರಿಲ್ಲದಿದ್ದರೆ ನನ್ನ ಗತಿಯೇನಂತ ತೋರಿ ಹೇಗೆ ಹೇಗೋ ಆಗುತ್ತೆ."

ಕಾಮಾಕ್ಷಮ್ಮನವರು :— (ತಾಂಬೂಲದ ತಟ್ಟೆಯನ್ನು ಕೆಳಗಿಟ್ಟು ಶಾಸ್ತ್ರಿಗಳ ಬಳಿ ಕುಳಿತು ಎಲೆಗೆ ಸುಣ್ಣವನ್ನು ಸವರಿ ಮಡಿಸಿಡುತ್ತ, ನಕ್ಕು) "ನಿಮ್ಮ ಬುದ್ಧಿಯೇ ಒಂದು ವಿಚಿತ್ರ. ನಿಮ್ಮ ನೊರೆಹಾಲು ಸಂತರ್ಪಣೆಗೂ ನಾನು ಅಡ್ಡಿ ಬರುವುದಿಲ್ಲ. ಈಗಿನ ರಗಳೆ ಹೇಳಿ. ಈಗ ಹುಲ್ಲಿಲ್ಲವಲ್ಲ."

ನಾರಾಯಣ ಶಾಸ್ತ್ರಿಗಳು :— (ನಿಟ್ಟುಸಿರು ಬಿಟ್ಟು) ಅಯ್ಯೋ! ನನಗೂ ಅದೇ ಯೋಚನೆ. ಹುಲ್ಲು ಬರಬೇಕಾಗಿತ್ತು ಗೌಡ ನಾಲ್ಕು ಬಂಡಿ ಹುಲ್ಲು ಕಳುಹಿಸುವ ಹಾಗೆ ಹೇಳಿದ್ದ. ಹುಲ್ಲು ಬರಲೇ ಇಲ್ಲ. ಯಾಚನೆ ಕಷ್ಟ. ಪಾಪ! ಆತನ ತೊಂದರೆಗಳೆಷ್ಟಿವೆಯೋ! ಕಾಮಧೇನು ಸೇವೆಗೆ ಗತಿ? ಗೋಗ್ರಾಸಕ್ಕೇನು ಮಾಡೋಣ? ಈ ಸಲ ಸರಿಯಾಗಿ ಮಳೆ ಬೆಳೆ

ಆಗದೆ ಇಷ್ಟು ಕಷ್ಟಕ್ಕಿಟ್ಟದೆ. ಈ ಊರಲ್ಲಿ ಕೂಡ ಎಲ್ಲರ ಮನೆಯಲ್ಲೂ ತಿರಿದುದಾಯಿತು. ಕೊಡುವವರು ತಾನೆ ಎಷ್ಟು ಸಲ ಕೊಟ್ಟಾರು ? ಆದರೂ ಪೆಚ್ಚಾಗಿಲ್ಲದವರನ್ನು ಯಾರನ್ನೂ ನಾನು ಕೇಳಲಿಲ್ಲ. ಮನಸ್ಸಿಗೆ ಅದೊಂದೇ ಸಮಾಧಾನ.''

ಕಾಮಾಕ್ಷಮ್ಮನವರು :—"ನಿಮ್ಮ ಕೊರಗು ನೋಡಿ ನನಗೆ ಪೇಚಾಟ. ನನ್ನ ಮಾತು ನಿಮಗೆ ಪಥ್ಯವಾಗಲಿಲ್ಲ. ಇಲ್ಲಿಂದ ಅಷ್ಟು ದೂರ ಹೋಗಿ ದೊರೆಗಳೆದುರಿಗೆ ಅತ್ತು ಹಿಂದಕ್ಕೆ ಬಂದಿರಿ. ನಾನು ಹೇಳಿದ ಹಾಗೆ ಮಾಡಿದ್ದರೆ ಒಂದು ಹಿಡಿ ಹುಲ್ಲಿಗೆ ಇಷ್ಟು ಗೋಳಾಡಬೇಕಾಗಿತ್ತೆ ? ಚಿನ್ನ ಬೆಳ್ಳಿ ಘಂಟೆಗಳನ್ನು ಕದ್ದ ಕಳ್ಳನಲ್ಲಿ ಕೂಡ ಕರುಣೆ ತೋರಿಸಿ ಅವುಗಳನ್ನೇ ಕೊಟ್ಟ ಧರ್ಮರಾಯ ದೊರೆಗಳು.''

ಆ ಮಾತುಗಳನ್ನು ಕೇಳಿ ಶಾಸ್ತ್ರಿಗಳು ಕೊಂಚ ಯೋಚಿಸುತ್ತ ಕುಳಿತರು. ಚಿನ್ನ ಬೆಳ್ಳಿ ಘಂಟೆಗಳ ವಿಚಾರವನ್ನು ಸಂಕ್ಷೇಪವಾಗಿ ಅರಿಕೆ ಮಾಡುತ್ತೇನೆ. ಆಳಿದ ಮಹಾಸ್ವಾಮಿಯವರಾದ ಮುಮ್ಮಡಿ ಕೃಷ್ಣ ರಾಜೇಂದ್ರ ಒಡೆಯರವರ ಸವಾರಿಯು ಸಂಸ್ಥಾನದ ನಾನಾ ಪ್ರದೇಶಗಳನ್ನು ಪರಾಂಬರಿಸಿಕೊಂಡುಬರಲು ಚಿತ್ತೈಸಿದ್ದಿತು. ಆಗ ಶಿವಗಂಗಾ ಕ್ಷೇತ್ರಕ್ಕೂ ಪ್ರಭುಗಳು ದಯಮಾಡಿದ್ದರು. ಬಂಡೆಯೊಂದರ ಮೇಲ್ಭಾಗದಿಂದ ಬಹಳ ಮುಂದಕ್ಕೆ ನಾಗರಹೆಡೆಯಂತೆ ಚಾಚಿಕೊಂಡಿರುವ ಮತ್ತೊಂದು ಬಂಡೆ. ಹಾಗೆ ನಾಗರಹೆಡೆಯಂತೆ ಹಾಯ್ದುಕೊಂಡಿರುವ ಭಾಗದಿಂದ ನೇತಾಡು ವಂತೆ ಒಂದು ದೊಡ್ಡ ಚಿನ್ನದ ಘಂಟೆಯನ್ನೂ ಒಂದು ದೊಡ್ಡ ಬೆಳ್ಳಿಯ ಘಂಟೆಯನ್ನೂ ಮಹಾಪ್ರಭುಗಳವರು ಹಾಕಿಸಿದ್ದರು. ಬಂಡೆಯು ಹಾಯ್ದು ಕೊಂಡಿರುವ ಭಾಗದ ಕೆಳಗೆ ದೊಡ್ಡ ಕಮರಿ. ಮೇಲಕ್ಕೆ ಕೊಂಡಿಗಳನ್ನು ಕೀಲಿಸಿ ಘಂಟೆಗಳನ್ನು ನೇತುಹಾಕುವುದೆಂದರೆ, ಪ್ರಾಣದ ಮೇಲಿನ ಆಶೆ ಯನ್ನು ಬಿಟ್ಟೇ ಆ ರೀತಿ ಮಾಡಬೇಕು. ಅಲ್ಲಿಯ ಸನ್ನಿವೇಶವು ಅಂತಹುದು. ಹಾಗಿದ್ದೂ ಅಲ್ಲಿಗೆ ಘಂಟೆಗಳನ್ನು ಹಾಕಿದ ಕೆಲಸಗಾರರ ಕೌಶಲ್ಯವನ್ನು ಕಂಡು ಮಹಾಸ್ವಾಮಿಯವರು, ಉದಾರವಾಗಿ ದ್ರವ್ಯವನ್ನು ಕೊಟ್ಟು ಸಂಜೆಯ ಹೊತ್ತಿಗೆ ಬೀಡಾರಕ್ಕೆ ದಯಮಾಡಿದರು. ಬೆಳಗಾಗುವ

ವೇಳೆಗೆ ಅಲ್ಲಿ ಘಂಟೆಗಳಿರಲಿಲ್ಲ. ಅವುಗಳನ್ನು ಹಾಕಿದವನೇ ಆ ಕೆಲಸ ಮಾಡಲಿಲ್ಲವೆಂಬುದು ಸ್ಪಷ್ಟವಾಗಿ ಗೊತ್ತಾಯಿತು. ಹಗಲು ಹೊತ್ತಿನಲ್ಲಿ ಮಾಡಿದರೇ ಅಪಾಯಕ್ಕೆ ಔತಣ ಹೇಳಿದಂತಿದ್ದ ಆ ಕೆಲಸ ರಾತ್ರಿಯ ವೇಳೆಯಲ್ಲಿ ನಡೆಯಿಸಿದವನ ಧೈರ್ಯವೂ, ಕೌಶಲ್ಯವೂ ಎಷ್ಟಿರಬೇಕೆಂದು ಪ್ರಭುಗಳವರು ವಿಸ್ಮಿತರಾದರು.

ಮತ್ತೆರಡು ಘಂಟೆಗಳನ್ನು ಹಾಕಿಸಿದ ಮೇಲೆ ಮಹಾರಾಜರವರು ಮುಂದಿನ ಮಜಲಿಗೆ ದಯಮಾಡುವವರಾಗಿದ್ದರು. ಅಷ್ಟರಲ್ಲಿ ಅಪರಾಧಿಯು ತನ್ನ ಕೃತ್ಯಕ್ಕಾಗಿ ಪಶ್ಚಾತ್ತಾಪಪಟ್ಟು ಅಧಿಕಾರಿಗಳಲ್ಲಿಗೆ ತಾನಾಗಿಯೇ ಬಂದು ತನ್ನ ತಪ್ಪನ್ನೊಪ್ಪಿಕೊಂಡು ಗೋಳಿಟ್ಟನು. ತನ್ನ ಬಡತನವು ತನ್ನಿಂದ ತಪ್ಪು ಮಾಡಿಸಿತೆಂದು ತಿಳಿಸಿದನು. ಪ್ರಭುಗಳವರಲ್ಲಿಗೆ ವರ್ತಮಾನ ಮುಟ್ಟಿತು. ಪ್ರಾಣದ ಆಶೆಯೂ ಕೂಡ ಇಲ್ಲದೆ ರಾತ್ರಿಯ ವೇಳೆಯಲ್ಲಿ ಘಂಟೆಗಳನ್ನು ಹಾರಿಸಿದ ಅವನ ಕೌಶಲ್ಯವನ್ನೂ, ಅವನ ಹೃದಯವು ಪಶ್ಚಾತ್ತಾಪ ದಗ್ಧವಾಗಿದ್ದುದ್ದನ್ನೂ ಕಂಡು ಮಹಾಸ್ವಾಮಿಯವರು ಅನನ್ಯಸಾಧಾರಣವಾದ ಔದಾರ್ಯದಿಂದ ಆ ಘಂಟೆಗಳನ್ನೂ ಅವನಿಗೇ ಕೊಟ್ಟು ಮುಂದೆ ಶೀಲವಂತನಾಗಿ ಬಾಳಬೇಕೆಂದು ಬುದ್ಧಿ ಹೇಳಿದರು. ಪ್ರಭುಗಳವರು ಮತ್ತೆ ಹೊಸ ಘಂಟೆಗಳನ್ನು ಹಾಕಿಸಿ ಮುಂದಿನ ಮಜಲಿನ ಪ್ರಯಾಣವನ್ನು ಕೈಕೊಂಡರು. ಮಹಾಸ್ವಾಮಿಯವರ ಔದಾರ್ಯದ ವಾರ್ತೆಯು ಸುತ್ತಮುತ್ತಲಿನ ಗ್ರಾಮಗಳಲ್ಲೆಲ್ಲಾ ಮಿಂಚಿನ ವೇಗದಲ್ಲಿ ಹರಡಿತು.

ಬಡತನವು ನೀಗುವಂತೆ ಮಹಾಸ್ವಾಮಿಯವರಲ್ಲಿ ಧನಸಹಾಯವನ್ನು ಬೇಡಿಬರಬೇಕೆಂದು ನಾರಾಯಣ ಶಾಸ್ತ್ರಿಗಳಿಗೆ ಕಾಮಾಕ್ಷಮ್ಮನವರಿಂದ ಕಾಂತಾಸಮ್ಮಿತಿಯ ನಿರೂಪವು ಬರುವುದೂ ತಡವಾಗಲಿಲ್ಲ. ಶಾಸ್ತ್ರಿಗಳೂ ಶ್ಲೋಕಗಳನ್ನು ಮಾಡಿಕೊಂಡು ಮಹಾಸ್ವಾಮಿಯವರ ಮುಂದಿನ ಮಜಲಿನ ಬೀಡಾರಕ್ಕೆ ಹೋದರು. ವಿದ್ವಜ್ಜನ ಪಕ್ಷಪಾತಿಗಳಾದ ಮಹಾಸ್ವಾಮಿಯವರ ಜೊತೆಯಲ್ಲಿ ಉದ್ದಾಮ ಪಂಡಿತರಾದ ಕುಣಿಗಲು ರಾಮಾಶಾಸ್ತ್ರಿಗಳೇ ಮುಂತಾದ ವಿದ್ವಾಂಸರೂ ಬರುವಂತೆ ಆಜ್ಞೆಯಾಗಿದ್ದು ಅವರೆಲ್ಲರೂ

ಬಂದಿದ್ದರು. ನಾರಾಯಣಶಾಸ್ತ್ರಿಗಳು ಅನಾಯಾಸವಾಗಿ ರಚಿಸಿದ್ದ ಸುಲಲಿತ ವಾದ ಶ್ಲೋಕಗಳ ಕವಿತಾಧೋರಣೆಯನ್ನು ಅವರೆಲ್ಲರೂ ಕೊಂಡಾಡಿದ್ದರು. ಶಾಸ್ತ್ರಿಗಳಿಗೆ ಪ್ರಭುಗಳ ದರ್ಶನವಾಗುವುದೂ, ಅಸಾಧಾರಣವಾದ ಬಹು ಮಾನವು ದೊರೆಯುವುದೂ ಸಿಶ್ಚಯವೆಂದು ಎಲ್ಲೆಲ್ಲಿಯೂ ಚರ್ಚೆಗಳು. ಅವುಗಳನ್ನು ಕೇಳಿ ಮಾಗಡಿಯ ಸುಬೇದಾರರೂ ತಾವೂ ಸಂಸ್ಕೃತ ಭಾಷೆಯನ್ನು ವ್ಯಾಸಂಗ ಮಾಡಿದ್ದರೆ ಚೆನ್ನಾಗಿದ್ದಿತೆಂದು ಗೊಣಗಿ ಕೊಂಡರಂತೆ.

ಯಥಾಕಾಲದಲ್ಲಿ ನಾರಾಯಣ ಶಾಸ್ತ್ರಿಗಳಿಗೆ ಮಹಾರಾಜರ ದರ್ಶನ ಭಾಗ್ಯವು ದೊರೆಯಿತು ಪಂಡಿತರಾದ ಧರ್ಮಪ್ರಭುಗಳು ಶಾಸ್ತ್ರಿಗಳ ಕವಿತ್ವ ವನ್ನು ಕೇಳಿ ಆನಂದಿಸಿ ಒಂದು ಕ್ಷಣಕಾಲ ಸ್ತಬ್ಧರಾಗಿದ್ದು ಆ ಬಳಿಕ ಮೃದುವಾಗಿ ತಲೆದೂಗಿ ಗಂಭೀರವಾಣಿಯಿಂದ "ದೇಹಕಟ್ಟಿಗೆ ತಕ್ಕ ಬುದ್ಧಿ. ಬುದ್ಧಿಯ ಔನ್ನತ್ಯಕ್ಕೆ ತಕ್ಕ ಕವಿತಾಪ್ರತಿಭೆ........ಬಹಳ ಸಂತೋಷ" ಎಂದು ಅಪ್ಪಣೆ ಕೊಡಿಸಿ ಶಾಸ್ತ್ರಿಗಳ ಕೋರಿಕೆಯೇನೆಂದು ಪ್ರಶ್ನೆ ಮಾಡಿದರು.

ಶಾಸ್ತ್ರಿಗಳವರು ಗಳಗಳನೆ ಅಳುತ್ತ, "ನಾನು ಪಾಪಿ, ನನಗೆ ಕಶಾಪ್ರಹಾರವಾಗುವಂತೆ ಅಪ್ಪಣೆಯಾಗಬೇಕು, ಮಹಾಸ್ವಾಮಿ. ನನ್ನ ಅಪರಾಧಕ್ಕೆ ಶಿಕ್ಷೆಯಾಗಬೇಕು. ಸರಸ್ವತೀದೇವಿಗೆ ಅಪಮಾನ ಮಾಡಲು ಬಂದವನು ನಾನು. ಈ ಸಲ ಬೆಳೆ ಹೋಯಿತು. ಬಡತನದ ಬಾಧೆಯಿಂದ ತಾಯಿಯನ್ನು ಮಾರಲು ಸಿದ್ಧನಾಗಿ ಹಾಳು ಹೊಟ್ಟೆಗೆ ಸುರಿದುಕೊಳ್ಳಲು ಹಣವನ್ನು ಯಾಚಿಸಲು ಬಂದೆ. ತಮ್ಮಂಥಾ ಧರ್ಮಪ್ರಭುಗಳ ಪ್ರಜೆ ಯೆನಿಸಲು ಈ ಪಾಪಿಗೆ ಯೋಗ್ಯತೆಯಿಲ್ಲ. ಕಶಾಪ್ರಹಾರವೇ ನನಗೆ ತಕ್ಕ ಮರ್ಯಾದೆ." ಎಂದು ಗದ್ಗದ ಧ್ವನಿಯ ಒಡಕು ಮಾತುಗಳಲ್ಲಿ ಹೇಳಿದರು.

ಮಹಾಪ್ರಭುಗಳವರು ಶಾಸ್ತ್ರಿಗಳ ಮನೋಧರ್ಮವು ಹೇಗಿದ್ದಿತೆಂಬು ದನ್ನರಿತು ಆಗಿನ ಸ್ಥಿತಿಯಲ್ಲಿ ಅವರಿಗೆ ಸಂಭಾವನೆಯನ್ನು ಕೊಟ್ಟು ವ್ಯಥೆ ಪಡಿಸುವುದು ಅನುಚಿತವೆಂದು ಭಾವಿಸಿ ಶಾಸ್ತ್ರಿಗಳಿಗೆ ಸಮಾಧಾನೋಕ್ತಿಗಳನ್ನು

ಹೇಳಿ ಯಥಾಕಾಲದಲ್ಲಿ ಬೀಳ್ಕೊಂಡರು. ಶಾಸ್ತ್ರಿಗಳ ವರ್ತನೆಯನ್ನು ಕಂಡವರೆಲ್ಲರೂ ಬೆಕ್ಕಸಬೆರಗಾದರು. ಪ್ರಭುಗಳವರ ಸಂತೋಷಕ್ಕಂತೂ ಪಾರವೇ ಇರಲಿಲ್ಲ. ಶಾಸ್ತ್ರಿಗಳು ಸಮ್ಮುಖದಿಂದ ಹೊರಟುಹೋದ ಮೇಲೆ "ಕೃತಯುಗದಲ್ಲಿರುವುದಕ್ಕೆ ತಕ್ಕ ಪುಣ್ಯಾತ್ಮರು. ಈ ಯುಗದಲ್ಲಿ ತಪ್ಪಿ ಹುಟ್ಟಿದ್ದಾರೆ." ಎಂದು ಬಕ್ಷಿಯವರೊಡನೆ ಮಹಾಸ್ವಾಮಿಯವರು ಅಪ್ಪಣೆ ಕೊಡಿಸಿದರು. ಕಾಮಾಕ್ಷಮ್ಮನವರು ಪ್ರಸ್ತಾವಿಸಿದುದು ಆ ಸನ್ನಿವೇಶದ ವಿಚಾರವನ್ನೇ. ಮಹಾಪ್ರಭುಗಳವರ ಸನ್ನಿಧಿಗೆ ಹೋಗಿದ್ದೂ ಅತ್ತುಬಿಟ್ಟಿರಲ್ಲಾ, ಬರಿಗೈಯಲ್ಲಿ ಬಂದರಲ್ಲಾ....ಎಂಬುದು ಕಾಮಾಕ್ಷಮ್ಮನವರ ಆಶ್ಚರ್ಯ ಅಥವಾ ವಿಷಾದವೆಂದರೂ ತಪ್ಪಲ್ಲ.

ಶಾಸ್ತ್ರಿಗಳು ಒಂದೆರಡು ಕ್ಷಣಕಾಲ ಸುಮ್ಮನೆ ಕುಳಿತಿದ್ದು ಕೊನೆಗೆ ಬಲವಂತವಾಗಿ ನಕ್ಕು "ನಾನು ಅತ್ತದ್ದನ್ನು ಹಂಗಿಸಿದೆಯೇ ಹೊರತು ದೇಶದಲ್ಲೇ ಪ್ರಖ್ಯಾತರಾಗಿ ಮಹಾರಾಜರ ಆಸ್ಥಾನ ವಿದ್ವಾಂಸರಲ್ಲಿ ಪ್ರಮುಖರಾಗಿರುವ ಕುಣಿಗಲು ರಾಮಾಶಾಸ್ತ್ರಿಗಳು ಕೂಡ ನನ್ನ ಕವಿತ್ವವನ್ನು ನೋಡಿ ಹಿಗ್ಗಿದ್ದನ್ನು ಹೇಳಲಿಲ್ಲ. ಅವರಿಗೆ ಮಹಾರಾಜರು ರತ್ನಕಂಕಣವನ್ನೂ ರತ್ನಖಚಿತವಾದ ತೋಡವನ್ನೂ ದಯಪಾಲಿಸಿದ್ದಾರೆ" ಎಂದರು.

ಕಾಮಾಕ್ಷಮ್ಮನವರು :— "ನಮ್ಮ ಮನೆ ಹಸುಗಳು ಆ ತೋಡ ತಿನ್ನುವಹಾಗಿದೆಯೋ ಹೇಳಿ. ಆ ತೋಡ ನಮ್ಮ ಮನೆ ಹಸುಗಳಿಗೆ ಸಿಕ್ಕುವ ಹಾಗಿದೆಯೋ ? ಅದಾದರೂ ಹೇಳಿ. ನಿಮ್ಮ ಗುಣ ನನಗೆ ತಿಳಿಯದೇ ಇಲ್ಲ. ಆದರೂ ಗೌಡನ್ನ ಕೂಡ ಹುಲ್ಲು ಕೇಳಿ ಬಂದಿರಿ. ದೊರೆಗಳ ಸನ್ನಿಧಾನದಲ್ಲಿ ಸಂಭಾವನೆ ಕೇಳದೆ ಅತ್ತುಬಂದಿರಲ್ಲಾ ಅಂತ ಹೇಳಿದೆ, ಅಷ್ಟೆ."

ನಾರಾಯಣ ಶಾಸ್ತ್ರಿಗಳು :— "ಬಡವನ ಹಾಗೆ ಗೌಡನ್ನ ಕೇಳಿ ಹುಲ್ಲು ತರೋದಕ್ಕೂ, ಸರಸ್ವತೀ ವಿಕ್ರಯದಿಂದ ಹಣ ಪಡೆಯುವುದಕ್ಕೂ ಭೇದವಿಲ್ಲವೆ ?"

ಶಾಸ್ತ್ರಿಗಳ ಮಾತು ಪೂರೈಸುವ ವೇಳೆಗೆ ಹಸುಗಳು ಕೊಟ್ಟಿಗೆಗೆ ಬಂದುವು. "ಅಂಬಾ" ಎಂದು ಒಂದು ಹಸುವು ಕೂಗಿತು. ಶಾಸ್ತ್ರಿಗಳು "ಅದು ಕಲ್ಯಾಣಿಯ ಕೂಗಿರಬೇಕು. ಆಗೋ, ಕಾವೇರಿಯ ಕೂಗು. ಏನು ಮಾಡಲಿ ದೇವರೆ ?'' ಎಂದರು. ಇಂಗಿತಜ್ಞರಾದ ಕಾಮಾಕ್ಷಮ್ಮ ನವರು ತಾಂಬೂಲದ ಸುದ್ದಿಯನ್ನೇ ಎತ್ತದೆ ಮೇಲಕ್ಕೆದ್ದರು. ಅಲ್ಲದೆ ಮೊದಲು ಕೂಗಿದ್ದು ಕಲ್ಯಾಣಿ. ಎರಡನೆಯ ಸಲ ಕೂಗಿದ್ದು ಕಾವೇರಿ. ನೀವು ಸರಿ. ಹಸುಗಳು ಉಸಿರಾಡುವ ಸದ್ದಿನಿಂದಲೇ ಅಮಾವಾಸ್ಯೆ ರಾತ್ರಿ ಯಲ್ಲಿ ಬೇಕಾದರೂ ಹಸುಗಳ ಗುರುತು ಹಿಡಿಯಬಲ್ಲಿರಿ.'' ಎಂದು ಹೇಳಿ ಹಸುಗಳನ್ನು ಕಟ್ಟಿಹಾಕುತ್ತಿದ್ದ ಆಳು ಅವುಗಳನ್ನು ಕಟ್ಟಿಹಾಕಿ ದ್ದಾನೋ ಇಲ್ಲವೋ ಎಂಬುದನ್ನು ನೋಡಲು ಕೊಟ್ಟಿಗೆಗೆ ಹೊರಡಲನು ವಾದರು.

ಅಷ್ಟರಲ್ಲಿ ಹಸುಗಳು ಮೇಲೆ ಮೇಲೆ ಕೂಗಲಾರಂಭಿಸಿದುವು. ಶಾಸ್ತ್ರಿ ಗಳು ತಳಮಳಗೊಂಡು ಕ್ಷಣಕಾಲ ಯೋಚಿಸಿ, "ಭಲಾ ಭಲಾ! ಭಾರಿ ಗೋಗ್ರಾಸ. ನರಸಪ್ಪಯ್ಯನವರ ಹಿತ್ತಿಲಿನಲ್ಲಿ ಹತ್ತು ಮೆದೆಗಳಿವೆ. ಅವರ ದನಗಳಿಗೆ ವರುಷಕ್ಕೆಲ್ಲಾ ಸಾಕಾಗಿ ಇನ್ನೂ ಮಿಗುತ್ತದೆ. ಹುಲ್ಲು ಕೇಳಿ ಹೊತ್ತುಕೊಂಡು ಓಡಿಬರುತ್ತೇನೆ.'' ಎಂದುಕೊಂಡು ನಗುತ್ತ ಉತ್ಸಾಹ ದಿಂದೆದ್ದರು. ಬೀಳು ಭೂಮಿಯೆಂದು ಹುಲ್ಲುಗಾವಲಿಗಾಗಿ ಅಗ್ಗದ ಬೆಲೆಗೆ ಕೊಂಡುಕೊಂಡ ಭೂಮಿಯಲ್ಲಿ ವಜ್ರದ ಗಣಿಯನ್ನು ಕಂಡವರಿಗೂ ಶಾಸ್ತ್ರಿಗಳಿಗಾದಷ್ಟು, ಸಂತೋಷವೂ, ಉತ್ಸಾಹವೂ ಆಗುತ್ತಿರಲಿಲ್ಲ.

ನರಸಪ್ಪಯ್ಯನಿಗೆ ಶಾಸ್ತ್ರಿಗಳ ಮೇಲೆ ಬಹಳ ಕೋಪವಿದ್ದಿತು. ಊರಿ ನಲ್ಲೆಲ್ಲಾ ತಾನೇ ಅತ್ಯಂತ ಧನಿಕನಾಗಿದ್ದೂ "ಒಣ ಓದಿನ ಶಾಸ್ತ್ರಿ"ಗೆ ದೇವಸ್ಥಾನದಲ್ಲಿ ಮೊದಲು ತೀರ್ಥಪ್ರಸಾದಗಳ ಮರ್ಯಾದೆಯು ನಡೆಯು ತ್ತಿದ್ದುದು ನರಸಪ್ಪಯ್ಯನಿಗೆ ಬಹುಕಾಲದಿಂದಿದ್ದ ಅಸಮಾಧಾನ. ಆ ಊರಿನಲ್ಲಿ ನಡೆದ ಒಂದು ಪಂಚಾಯತಿಯಲ್ಲಿ ಶಾಸ್ತ್ರಿಗಳು ತನಗೆ ವಿರೋಧವಾಗಿ ವಾದಿಸಿದುದು ಸಾಲದೆ "ದೊಡ್ಡವರು ಬಡವರನ್ನು ಮುಳುಗಿಸಬಾರದು.

ಅಂಥಾ ಯೋಚನೆಯೇ ನಿಮ್ಮಂಥಾ ಧನಿಕರಿಗೆ ತರವಲ್ಲ. ಆ ಬಡಪಾಯಿಗೆ ಸೇರಿದ ಭೂಮಿಯನ್ನು ಒತ್ತರಿಸಿಕೊಂಡಿರುವುದು ಸರಿಯಲ್ಲ. ಯಾರ ಹಿಂದೂ ಹೋಗದೆ ಉಳಿದೇ ಇರುವ ಭೂಮಿಯು ನಮ್ಮ ನಮ್ಮ ಹಿಂದೆ ಪರಲೋಕಕ್ಕೆ ಬಂದೀತೆ?" ಎಂದು ಹೇಳಿದ್ದರು.

ಅಂದಿನಿಂದಲೂ ನರಸಪ್ಪಯ್ಯನ ಕೋಪವು ವೃದ್ಧಿಹೊಂದುತ್ತಿದ್ದಿತು. ಶಾಸ್ತ್ರಿಗಳು ಹಾಗೆ ಹೇಳದೆಹೋಗಿದ್ದರೆ ಇತರ ಪಂಚಾಯತರು ತಮ್ಮ ಕಡೆಗೇ ತೀರ್ಪು ಹೇಳುತ್ತಿದ್ದರೆಂದು ನರಸಪ್ಪಯ್ಯನ ಭಾವನೆ. "ಒಣ ಓದಿನ ಶಾಸ್ತ್ರಿಗೆ ತಕ್ಕ ಬಿಸಿ ಮುಟ್ಟಿಸಬೇಕು" ಎಂದುಕೊಳ್ಳುತ್ತ ನರಸಪ್ಪಯ್ಯನು ಸಮಯ ವನ್ನು ನಿರೀಕ್ಷಿಸಿಕೊಂಡು "ಕ್ರೂರ ನಕ್ರಾಕುಲದೊಳಿಡಿದಿರ್ದ ಪೆರ್ಮಡು ಗಭೀರ ಜಲಯುತವಾದಂತೆ" ಸುಮ್ಮನಿದ್ದನು. ಬಡವರಾಗಿದ್ದೂ ದೈನ್ಯತೆಗೆ ದೂರರಾಗಿ ಎಂದೆಂದಿನ ಮಾತನ್ನು ಅಂದಂದಿಗೇ ಬಿಟ್ಟುಬಿಡುತ್ತ ಎಲ್ಲರ ಕ್ಷೇಮವನ್ನೂ ಕೋರುತ್ತಿದ್ದ ಸರಳಹೃದಯರಾದ ಶಾಸ್ತ್ರಿಗಳಿಗೆ ಅದರ ಸುಳಿವೇ ಸಿಕ್ಕಿರಲಿಲ್ಲ.

ಶಾಸ್ತ್ರಿಗಳು ಅಳುವ ಮಗುವನ್ನು ಮನೆಯಲ್ಲಿ ಬಿಟ್ಟುಬಂದ ತಾಯಿ ಯಂತಾಗಿದ್ದರು. ನರಸಪ್ಪಯ್ಯನ ಮನೆಯ ಹಿತ್ತಿಲುಬಾಗಿಲು ತೆಗದಿದ್ದುದನ್ನು ಕಂಡು ವಿಧಿಯು ತಮಗೆ ಅನುಕೂಲವಾಗಿದ್ದಿತೆಂದೂ ಶಕುನವಾಯಿತೆಂದೂ ಸಂತೋಷಿಸಿ ಉತ್ಸಾಹದಿಂದ ಹಿತ್ತಿಲಿಗೆ ನುಗ್ಗಿದರು. "ಹೊರಗೆ ಗೋಮಾಳ ದಲ್ಲಿ ಹುಲ್ಲಿನ ಹುಟ್ಟೇ ಇಲ್ಲ. ಹಸಿದು ಬಂದ ಕಲ್ಯಾಣಿಯು ಎಷ್ಟು ಕೂಗು ತ್ತಿದ್ದಾಳೋ! ಉಳಿದ ತಾಯಿಯರೆಷ್ಟು ಅರಚುತ್ತಿದ್ದಾರೋ ಏನೋ! ಸದ್ಯ ಗೋಗ್ರಾಸ ಸಿಕ್ಕಿದರೆ!" ಎಂದು ಅವರ ಹೃದಯವು ಮಿಡಿಯು ತ್ತಿದ್ದಿತು.

ನಾರಾಯಣ ಶಾಸ್ತ್ರಿಗಳು ಒಡನೆಯೇ "ನರಸಪ್ಪಯ್ಯನವರೇ, ನರಸಪ್ಪಯ್ಯನವರೇ, ನಮ್ಮ ಮನೆಯಲ್ಲಿ ಗೋಗ್ರಾಸಕ್ಕೆ ಗೊಟ್ಟವಾಗಿದೆ. ನಾಳೆ ಹುಲ್ಲುಗಾಡಿಗಳು ಬರುತ್ತವೆ. ಇಲ್ಲಿಗೇ ಕಳುಹಿಸಿಬಿಡುತ್ತೇನೆ. ಈಗ ನಿಮ್ಮ ಮೆದೆಗಳಲ್ಲೆಲ್ಲ ಸಣ್ಣ ಮೆದೆ ಹುಲ್ಲು ತೆಗೆದುಕೊಂಡು ಹೋಗುತ್ತೇನೆ" ಎಂದರು. ಅಲ್ಲದೆ ನರಸಪ್ಪಯ್ಯನು ಮನೆಯೊಳಗೆ ಓಡಾಡುತ್ತಿದ್ದ ತಮ್ಮ

ಕೊಠಡಿಗೆ ಹೋದುದನ್ನೂ ಕಂಡರು. ನರಸಪ್ಪಯ್ಯನಂತಹ ಧನಿಕನಿಗೆ ತಮ್ಮ ಕೋರಿಕೆಯನ್ನು ಸಲ್ಲಿಸಿ ಹುಲ್ಲನ್ನು ಕಡವಾಗಿ ಕೊಡುವುದು ತೀರ ಅಲ್ಪವೆಂದೂ, ಅದಕ್ಕಾಗಿಯೇ ಆತನು ಮಾತನಾಡದೆ ಸುಮ್ಮನೆ ಹೊರಟು ಹೋಗಿರಬೇಕೆಂದೂ ಶಾಸ್ತ್ರಿಗಳು ಭಾವಿಸಿದರು.

ಬಾವಿಯಿಂದ ಸೇದುವ ಹಗ್ಗವನ್ನೆಳೆದುಕೊಂಡು, ಚಿಕ್ಕ ಮೆದೆಯ ಹುಲ್ಲನ್ನು ಹೊರೆ ಹೊರೆಯಾಗಿ ಕಟ್ಟಿ ಮನೆಗೆ ಸಾಗಿಸಿ ಆ ಬಳಿಕ—ಎಂದರೆ ಹುಲ್ಲೆಲ್ಲಾ ತಮ್ಮ ಮನೆಗೆ ಸಾಗಿದ ಬಳಿಕ—ಬಾವಿಯ ಹಗ್ಗವನ್ನು ಹಿಂದಕ್ಕೆ ತಂದಿಟ್ಟು ಶಾಸ್ತ್ರಿಗಳು ಮನೆಗೆ ಹೋದರು.

ಮೊದಲನೆಯ ಹೊರೆಯನ್ನು ತೆಗೆದುಕೊಂಡು ಹೋದಾಗಲೆ ಕೂಗುತ್ತಿದ್ದ ಹಸುಗಳಿಗೂ, ಕರುಗಳಿಗೂ ಎರಡೆರಡು ದಿನಗಳಿಗಾಗುವಷ್ಟು ಹುಲ್ಲನ್ನು ಹಾಕಿ "ನಾನು ಇನ್ನು ಮೇಲೆ ಹೀಗೆ ಹೊಟ್ಟೆಯನ್ನು ಚುರುಗುಟ್ಟಿಸಿ ಅವಿವೇಕ ಮಾಡೋದಿಲ್ಲ. ತಿನ್ನಿ ತಾಯಿಯರಿರಾ! ಪುಷ್ಕಳವಾಗಿ ತಿನ್ನಿ." ಎಂದು ಹೇಳಿ, ಹಸುಗಳನ್ನು ಮೈದಡವಿ, ಕಲ್ಯಾಣಿಯೆಂದು ತಾವು ಹೆಸರಿಟ್ಟಿದ್ದ, ಕಪಿಲವರ್ಣದ ಹಸುವಿನ ಕೊರಳನ್ನು ತಬ್ಬಿಕೊಂಡು "ತಿನ್ನಮ್ಮ, ತಿನ್ನು" ಎಂದುಕೊಂಡು ಮತ್ತೆ ಹುಲ್ಲನ್ನು ತರಲು ಓಡಿ ಹೋದರು.

ಶಾಸ್ತ್ರಿಗಳು ಕೊನೆಯ ಹೊರೆಯನ್ನು ತಂದು ಹಿತ್ತಿಲಿನಲ್ಲಿ ಉಳಿದುವುಗಳ ಜೊತೆಗೆ ಸೇರಿಸಿ, ಹಗ್ಗವನ್ನು ನರಸಪ್ಪಯ್ಯನವರ ಮನೆ ರಾಟೆಗೆ ಸೇರಿಸಿ ಬಂದಾಗ ಕಾಮಾಕ್ಷಮ್ಮನವರು "ಇದೇನು ಸಡಗರ, ಏನು ಕಥೆ! ಹುಲ್ಲನ್ನು ತರುವ ಸಡಗರದಲ್ಲಿ, ಹದಿನೆಂಟು ವರುಷದವರಾಗಿಬಿಟ್ಟಿರಿ. ಎಷ್ಟು ಹುಲ್ಲು ತಂದು ಆಯಾಸಪಟ್ಟಿರಿ! ಜನರು ಆಡಿಕೊಂಡಾರೆಂಬ ಸಂಕೋಚದಿಂದ ನಾನು ಬರಲಿಲ್ಲ. ಇಲ್ಲದೆ ಹೋಗಿದ್ದರೆ ನಾನೂ ಹುಲ್ಲು ತರುತ್ತಿದ್ದೆ" ಎಂದರು. ಶಾಸ್ತ್ರಿಗಳು "ಅದೆಲ್ಲಾ ಹಾಗಿರಲಿ, ಸುಣ್ಣ ಸವರಿ ಮಡಿಸಿಟ್ಟ ಎಲೆಗಳೆಲ್ಲಾ ಬರಲಿ. ನಿರಾತಂಕವಾಗಿ ತಾಂಬೂಲವನ್ನು ಮೆಲ್ಲೋಣ. ಕತ್ತಲೆಯಲ್ಲಿ ಕೂಡ ಕಲ್ಯಾಣಿಯ ಕಣ್ಣುಗಳು ಹೇಗೆ ಹೊಳೆಯುತ್ತವೆಯೋ! ನೀನು ಎಂದಾದರೂ ನೋಡಿದ್ದೀಯ? ಹಸುಗಳು ಸೊರಗುವುದು ತಪ್ಪಿತಲ್ಲ.

ಇನ್ನು ಗೆದ್ದೆವು" ಎಂದು ಹೇಳಿ ಹಜಾರದಲ್ಲಿ ಕುಳಿತರು. ಯಥೇಷ್ಟವಾಗಿ ತಾಂಬೂಲದ ಚರ್ವಣವೂ ಆಯಿತು. ಅತ್ತ ನರಸಪ್ಪಯ್ಯನು 'ಒಣ ಓದಿನ ಶಾಸ್ತ್ರಿ ನನ್ನ ಕೈಗೆ ಸಿಕ್ಕಿದ. ಇನ್ನು ನನ್ನ ಕೈಚಳಕ ನೋಡಲಿ" ಎಂದು ಹಿಗ್ಗುತ್ತಿದ್ದನು.

೨

ಮಾಗಡಿ ತಾಲ್ಲೂಕು ಸುಬೇದಾರರು ಆಗ ಸೋಲೂರಿನಲ್ಲಿ ಮೊಕ್ಕಾಂ ಮಾಡಿದ್ದರು ಆಗ ಸುಬೇದಾರರಿಗೆ ಆಮಿಲ್‌ದಾರರೆಂದೂ ಹೆಸರು. ನರಸಪ್ಪಯ್ಯನು ಅವರಲ್ಲಿಗೆ ಹೋಗಿ ತನ್ನ ಮನೆಯಲ್ಲಿ ನಾರಾಯಣ ಶಾಸ್ತ್ರಿಗಳು ಹುಲ್ಲುಮೆದೆ ಕಳವು ಮಾಡಿದರೆಂದು ದೂರು ಹೇಳಿದನು. ಆಮಿಲ್‌ದಾರರು ಮೆಚ್ಚುವಂತಹ ಹೂವಿನ ಹಾರವನ್ನೂ, ದೊಡ್ಡ ದೊಡ್ಡ ಸಿಂಬೆಹಣ್ಣುಗಳ "ನಜರು" ಕೈಗಾಣಿಕೆಯನ್ನೂ ತೆಗೆದುಕೊಂಡು ಹೋಗಿದ್ದ ನರಸಪ್ಪಯ್ಯನು ಮೂರಕ್ಕೆ ಮುನ್ನೂರರಂತೆ ಅತಿಶಯೋಕ್ತಿಗಳನ್ನು ಸೇರಿಸಿ ಶಾಸ್ತ್ರಿಗಳ ಅಪರಾಧವನ್ನು ಬಣ್ಣಿಸಿದನು. ಸುಬೇದಾರರು ಅದನ್ನೆಲ್ಲ ಕೇಳಿ, "ಯಾರಿದ್ದಾರಯ್ಯ ನನ್ನ ಸುಬೇದಾರಿಯಲ್ಲಿ ಇಂತಹ ಪಟಿಂಗಶಾಸ್ತ್ರಿ!" ಎಂದು ಸಿಂಹ ಗರ್ಜನೆ ಮಾಡಿ ಓಲೆಕಾರನನ್ನು ಕರೆದು "ಇವರ ಊರಿಗೆ ಹೋಗು. ಕಡೇ ಮನೆ ನಾರಾಯಣ ಶಾಸ್ತ್ರಿಯಂತೆ, ಹೇಗಿದ್ದರೆ ಹಾಗೇ ಹಿಡಿದುಕೊಂಡು ಬಾ. ಬಿಟ್ಟುಬಂದರೆ ತಲೆ ಹೋದೀತು ಜೋಕೆ" ಎಂದು ಆಜ್ಞಾಪಿಸಿದರು. (ಸಮನ್ ಕಳುಹಿಸುವುದು ಮುಂತಾದ ನಡೆವಳಿಕೆಗಳು ಆಗ ಆಚರಣೆಯಲ್ಲಿರಲಿಲ್ಲ) ಆ ನರಸಪ್ಪಯ್ಯನು ಆನಂದದಿಂದ ಮೈಮರೆತು ಸುಬೇದಾರರಿಗೆ ಅಡ್ಡ ಬಿದ್ದು ನಮಸ್ಕರಿಸಿ, "ಧರ್ಮಪ್ರಭುಗಳು" ಎಂದನು.

ಓಲೆಯಕಾರನು ನಾರಾಯಣ ಶಾಸ್ತ್ರಿಗಳ ಮನೆಯನ್ನು ಸೇರಿದಾಗ ಶಾಸ್ತ್ರಿಗಳು ತಲೆಗೆ ಎಣ್ಣೆಯನ್ನೊತ್ತಿಕೊಂಡು ಬಚ್ಚಲು ಮನೆಯ ಒಲೆಯ ಮುಂದೆ ಕುಳಿತಿದ್ದರು. ಕಾಮಾಕ್ಷಮ್ಮನವರು ಅವನನ್ನು ಕುರಿತು, "ನೀನು ಯಾರಪ್ಪ" ಎಂದು ಕೇಳಿದರು. "ಸುಬೇದಾರರ ತೈನಾತಿ. ಸೋಲೂರಿಂದ

ಈ ಊರಿಗೆ ಬಂದೆ. ಯಜಮಾನರನ್ನ ಹೆಂಗಿದ್ದರೆ ಹಂಗೆ ಕರೆದುಕೊಂಡು ಬರಬೇಕೆಂದು ಅಪ್ಪಣೆಯಾಗ್ಯೆತೆ. ಸೋಲೂರಿಗೆ ಈಗಲೇ ಹೊರಡಬೇಕು. ಮನೇಲಿದ್ದಾರಾ ?" ಎಂದು ಆಗಂತುಕನು ಉತ್ತರ ಹೇಳಿದನು.

ಶಾಸ್ತ್ರಿಗಳು "ಇದ್ದೇನಯ್ಯ, ಯಾಕೆ ಬರಹೇಳಿದರು ? ಏನಂತೆ ?" ಎಂದರು. ಆಳು "ದೊಡ್ಡವರ ಮಾತು ನನಗೆ ತಿಳಿದಾತ ? ಹೆಂಗಿದ್ದರೆ ಹಂಗೇ ಬರಬೇಕಂತೆ" ಎಂದನು. ಕಾಮಾಕ್ಷಮ್ಮನವರು ಬಚ್ಚಲು ಮನೆಗೆ ಹೋಗುವ ವೇಳೆಗೆ ಶಾಸ್ತ್ರಿಗಳು ಪ್ರಯಾಣಸನ್ನದ್ಧರಾಗಲು ಪಂಚೆಯುನ್ನುಡು ತ್ತಿದ್ದರು.

ಕಾಮಾಕ್ಷಮ್ಮನವರು :— "ಯಾಕೆ ಕರೆಕಳುಹಿಸಿದರೋ ಏನೋ ? ಇದೇನು ಈ ವಿಚಿತ್ರ ! ನೀರು ಹಾಕಿಕೊಂಡು ಊಟಮಾಡಿ ಹೊರಡಿ. ಅವನೂ ಇದೇ ತಾನೇ ಆಯಾಸಪಟ್ಟು ಬಂದಿದ್ದಾನೆ, ಊಟ ಮಾಡಲಿ."

ನಾರಾಯಣ ಶಾಸ್ತ್ರಿಗಳು :— "ಧರ್ಮಪ್ರಭುಗಳಾದ ಮಹಾರಾಜ ರವರ ಸನ್ನಿಧಾನದಲ್ಲಿ ಅವರಿಗೆ ತಕ್ಕ ಸತ್ಪೂಜೆಯಾಗಬೇಕೆಂದು ಮನಸಾ ಪ್ರತಿಜ್ಞೆ ಮಾಡಿದ್ದೇನೆ. ಸುಬೇದಾರರು ಮಹಾರಾಜರ ಪ್ರತಿನಿಧಿಗಳು: ಅವರ ಆಜ್ಞೆಯೂ ಮಹಾರಾಜರ ಆಜ್ಞೆಗೆ ಸಮಾನ. ಇಗೋ, ಹೊರಟೆ. ಈ ದಿನ ಹೇಗೂ ಅನಧ್ಯಯನ ; ಹುಡುಗರಿಗೆ ಪಾಠವಿಲ್ಲ."

ಕಾಮಾಕ್ಷಮ್ಮನವರು :— "ನಾನು ಹೋಗಕೂಡದೆನ್ನಲಿಲ್ಲ. ನೀರು ಹಾಕಿಕೊಂಡು, ಊಟಮಾಡಿ, ಪ್ರಯಾಣ ಮಾಡಿ. ಅವನಿಗೂ ಊಟ ವಾಗಲಿ."

ನಾರಾಯಣ ಶಾಸ್ತ್ರಿಗಳು :— "ಉಂಟೆ ? ಉಂಟೆ ? ಹೇಗಿದ್ದರೆ ಹಾಗೆ ಬರಬೇಕೆಂದು ನಿರೂಪ ಬಂದಿದೆ."

ಕಾಮಾಕ್ಷಮ್ಮನವರು :— "ತಲೆಯೆಲ್ಲಾ ಎಣ್ಣೆಯಾಗಿದ್ದೂ ಹಾಗೇ ಬರಬೇಕೆಂದು ಅದಕ್ಕೆ ಅರ್ಥವೆ? ನೀರು ಹಾಕಿಕೊಂಡು ಊಟ ಮಾಡಿ ಕೊಂಡು ಹೋಗುವಷ್ಟು ತಡವಾಗಕೂಡದೆ ?"

ನಾರಾಯಣ ಶಾಸ್ತ್ರಿಗಳು :— "ಕೂಡದು, ಕೂಡದು, ಸರ್ವಥಾ ಕೂಡದು. ರಾಜಾಜ್ಞೆಯು ಬಲವತ್ತರ. ವಿದ್ಯೆಯ ಗಂಧವಿದ್ದವರೇ ಆಲಸ್ಯ ಮಾಡಿದರೆ ಹೇಗೆ? ನಾನು ಅಭ್ಯಂಜನ ಮಾಡಿಕೊಂಡು, ಊಟಮಾಡಿ ಹೋಗುವುದಾದರೆ ಅಕ್ಷರಸ್ಥನಲ್ಲದವನು ಗದ್ದೇ ಕಬ್ಬನ್ನೆಲ್ಲಾ ಗಾಣವಾಡಿ ಆಲೇಮನೆ ಕೆಲಸ ಪೂರೈಸಿಕೊಂಡು ಬರುತ್ತೇನೆಂದರೋ? ನಾನು ಹೋಗಿ ಬರುತ್ತೇನೆ."

ನಾರಾಯಣ ಶಾಸ್ತ್ರಿಗಳು ಹೊರಟೇಬಿಟ್ಟರು.

೩

ತುಂಡುಪಂಚೆಯನ್ನುಟ್ಟು, ಹರಕು ಧೋತ್ರವನ್ನು ಹೊದೆದು ಉರಿ ಬಿಸಿಲಿನಲ್ಲಿ ಎರಡು ಹರಿದಾರಿ ದೂರ ನಡೆದುಬಂದ ಎಣ್ಣೆತಲೆಯ ಶಾಸ್ತ್ರಿಗಳನ್ನು ಕಂಡು ಸುಬೇದಾರರು ಬೆಕ್ಕಸಬೆರಗಾದರು. ದೃಷ್ಟಿಸಿ ನೋಡಿದರೆ, ಮಹಾರಾಜರ ಬೀಡಾರದಲ್ಲಿ ಅಂದು ನೋಡಿದ್ದ—"ಅತ್ತುಹೋದ ಶಾಸ್ತ್ರಿಗಳೆಂದು" ಸುಪ್ರಸಿದ್ಧರಾಗಿದ್ದ—ಶಾಸ್ತ್ರಿಗಳ ಸ್ವಯಂವ್ಯಕ್ತಿ.

ಸುಬೇದಾರರು "ಇದೇನಿರಯ್ಯಾ! ಹೀಗೆ ಬಂದಿದ್ದೀರಿ?" ಎಂದರು. ಅಲ್ಲದೆ ಓಲೆಯಕಾರನ ಮೇಲೆ ಕೋಪಿಸಿಕೊಂಡು "ಜ್ಞಾನವಿರಲಿಲ್ಲವೆ? ಕತ್ತೆ! ಹೇಗಿದ್ದರೆ ಹಾಗೆ ಕರೆ ತರಬೇಕೆಂದರೆ ಹೀಗೆ ಬರಹೇಳಬಹುದೆ?" ಎಂದರು. ಶಾಸ್ತ್ರಿಗಳು, ಆ ಅಪರಾಧವೂ ನನ್ನದು. ಅವನು ನಿರಪರಾಧಿ. ಪಾಪ, ದಣಿದು ಬಂದಿದ್ದಾನೆ. ತಾವು ಮಹಾರಾಜರ ಪ್ರತಿನಿಧಿಗಳು. ತಮ್ಮ ಆಜ್ಞೆಯು ಶಿರೋಧಾರ್ಯವೆಂದು ಆಲಸ್ಯ ಮಾಡದೆ ಓಡಿಬಂದೆ" ಎಂದರು. ಸುಬೇದಾರರಿಗೂ ಇನ್ನೂ ಊಟವಾಗಿರಲಿಲ್ಲ.

ಸುಬೇದಾರರ ಆಜ್ಞೆಯ ಮೇಲೆ ಶಾಸ್ತ್ರಿಗಳಿಗೆ ಅಭ್ಯಂಜನವಾಯಿತು. ಒಡನೆಯೇ ಮೃಷ್ಟಾನ್ನ ಭೋಜನವೂ ಪೂರೈಸಿತು. ಅನಂತರ ವಿಚಾರಣೆಗೆ ಪ್ರಾರಂಭ. ಕಕ್ಷಿಗಾರರ ಊಟವೂ ಅಲ್ಲಿಯೇ. ಕಕ್ಷಿಗಾರರ ವಿಚಾರಣೆಯೂ ಅಲ್ಲಿಯೇ. ಭೋಜನದ ವೇಳೆಯಲ್ಲಿ ಸಭ್ಯಗೃಹಸ್ಥರಾಗಿ, ಅತಿಥಿಲಾಭದಿಂದ

ಧನ್ಯರಾದಂತೆ ಆಗ ತೋರ್ಪಡಿಸಿಕೊಂಡ ಅದೇ ಸುಬೇದಾರರೇ ಈಗ ದರ್ಪ ದಿಂದ ಕೂಡಿದ ಅಧಿಕಾರ ನಿರ್ವಹಣದ ಮೂರ್ತಸ್ವರೂಪ.

ಸುಬೇದಾರರು ಗಂಭೀರ ಮುಖಮುದ್ರೆಯಿಂದ "ಶಾಸ್ತ್ರಿಗಳೇ ನೀವು ಕಳವು ಮಾಡಿದವರು. ನಿಮ್ಮ ಕೆಲಸ ತಪ್ಪು. ಅಕಾರ್ಯ" ಎಂದರು.

ನಾರಾಯಣ ಶಾಸ್ತ್ರಿಗಳು :— "ಮಹಾಸ್ವಾಮಿ! ನಾನು ಕಳವು ಮಾಡಿಲ್ಲ."

ಸುಬೇದಾರರು :— "ಕಳವಿನ ಜೊತೆಗೆ ಸುಳ್ಳಿನ ಅಪರಾಧವನ್ನೂ ಸೇರಿಸಬೇಡಿ, ಎಚ್ಚರಿಕೆ. ಸೆರೆಮನೆಯು ಹಸಿದ ಹುಲಿಯಂತೆ ಬಾಯಿ ತೆಗೆದುಕೊಂಡಿದೆ. ಸುಳ್ಳು ಹೇಳಬೇಡಿ."

ನಾರಾಯಣ ಶಾಸ್ತ್ರಿಗಳು :— "ಎದುರುವಾದಿಸಿದನೆಂದು ಭಾವಿಸ ಕೂಡದು. ತಾವು ಈ ಮಾತಿನಿಂದ ಋಷಿಗಳ ಗೋತ್ರಕ್ಕೇ ಅಪಮಾನ ಮಾಡಿದಿರಿ. ವಿಚಾರಣೆ ಕಾಲದಲ್ಲಿ 'ಹೇಳು' ಎಂದ ಮಾತ್ರಕ್ಕೇ ಸತ್ಯವನ್ನೇ ಹೇಳುವುದು ಬ್ರಾಹ್ಮಣ ಧರ್ಮ. "ಬ್ರೂಹೀತಿ ಬ್ರಾಹ್ಮಣಂ ಬ್ರೂಯಾತ್" ಎಂಬುದೇ ಸ್ಮೃತಿವಾಕ್ಯ."

ಸುಬೇದಾರರು :— "ಹಾಗಾದರೆ ನೀವು ಹುಲ್ಲು ಸಾಗಿಸಲಿಲ್ಲವೋ."

ನಾರಾಯಣ ಶಾಸ್ತ್ರಿಗಳು :— "ಗೋಗ್ರಾಸಕ್ಕಾಗಿ ಹುಲ್ಲು ತಂದದ್ದು ಉಂಟು."

ಸುಬೇದಾರರು :— "ಈಗತಾನೆ ಹೇಳಿದಿರಿ, ಕಳವು ಮಾಡಿಲ್ಲವೆಂದು. ಇದೇನಿದು ತಲೆಕೆಳಕು ವ್ಯಾಪಾರ? ಜೋಕೆ! ನಾನು ಪಟಂಗರಿಗೆ ಏಳು ಕೆರೆ ನೀರು ಎತ್ತಿಕುಡಿಸುವ ಸುಬೇದಾರ."

ನರಸಪ್ಪಯ್ಯ :— "ಏನು ತಲೆಕೆಳಕು ವ್ಯಾಪಾರ ಮಹಾಸ್ವಾಮಿ?"

ಸುಬೇದಾರರು :— ಮುಚ್ಚಿರಯ್ಯ ಬಾಯಿ ಮುಚ್ಚಿರಯ್ಯ. ಸುಬೇದಾರ ನಾನು; ನೀವಲ್ಲ ಸುಬೇದಾರರು ನಿಮ್ಮನ್ನ ಕೇಳಿದಾಗ ಕೇಳಿದಷ್ಟಕ್ಕೆ ಹೇಳಿ. ಏನಂತೀರಿ ಶಾಸ್ತ್ರಿಗಳೆ?"

ನಾರಾಯಣ ಶಾಸ್ತ್ರಿಗಳು :— "ಗೃಹಸ್ಥನಾಗಿ ಗೋಗ್ರಾಸ ಸಮರ್ಪಿಸದೆ ಹಸುಗಳನ್ನು ಉಪವಾಸ ಕೆಡವಿದರೆ ಪಾಪವಲ್ಲವೋ ? ಮಹಾಭಾರತ ವಚನ ಸುಳ್ಳೋ ?"

ಸುಬೇದಾರರು :— ಈ ಪುರಾಣ ನಮಗೆ ಬೇಡ. ಒಂದು ಮೆದೆ ಹುಲ್ಲು ಆರೇ ಸಲಕ್ಕೇ ಸಾಗಿಸಿದರಂತೆ, ಏನಯ್ಯ, ನರಸಪ್ಪಯ್ಯನವರೇ! ಆರುಸಲಕ್ಕೇ ಮೆದೆಹುಲ್ಲು ಸಾಗಿಸಿದ್ದು ನಿಜವೋ ? ಹುಲ್ಲು ಸಾಗಿಸಿದ್ದೇನೋ ಒಪ್ಪಿದ್ದಾರೆ. ಆದರೆ ಆರೇ ಸಲಕ್ಕೆ ಮೆದೆ ಹುಲ್ಲನ್ನು ಸಾಗಿಸಿದರೆ? ಜ್ಞಾಪಿಸಿಕೊಳ್ಳಿ."

ನರಸಪ್ಪಯ್ಯ :— "ನಾನು ಹೇಳಿರುವುದು ನಿಜ ಮಹಾಸ್ವಾಮಿ! ಸೇದುವ ಹಗ್ಗದಲ್ಲಿ ಕಟ್ಟಿದ್ದ ಹೊರೆಗಳು—ದೆವ್ವ ಹೊರೆಗಳು. ಎಷ್ಟು ಎತ್ತರವಿದ್ದಾರೆ, ಹೇಗಿದ್ದಾರೆ, ನೋಡಿ."

ಸುಬೇದಾರರು :— "ಶಿಕ್ಷೆ ಕೊಡಬಹುದೋ ಶಾಸ್ತ್ರಿಗಳೆ? ಹುಲ್ಲಿನ ಕಳವನ್ನು ಒಪ್ಪಿದ್ದೀರಿ. ಇಂಥಾವರು ಮಹಾರಾಜರಲ್ಲಿ ಶ್ಲೋಕಗಳನ್ನು ಬೇರೆ ಓದೋಕೆ ಬಂದಿದ್ದಿರಿ. ಅಬ್ಬ. ಎಂಥಾವರಪ್ಪ!"

ನಾರಾಯಣ ಶಾಸ್ತ್ರಿಗಳು :— "ನಾನು ಹುಲ್ಲನ್ನು ಸಾಗಿಸಿದ್ದುಂಟು. ಆದರೆ ಕಳವು ಮಾಡಲಿಲ್ಲ. ಇವರು ಮನೆಯಲ್ಲಿದ್ದರು. ಅದನ್ನು ನಾನು ಕಂಡೆ. ಗೌಡ ಕಳುಹಿಸಿದೊಡನೆಯೇ ಅವನು ಕಳುಹಿಸಿದ ಆ ಹುಲ್ಲನ್ನೆಲ್ಲಾ ಇವರಿಗೇ ಕಳುಹಿಸುವುದಾಗಿ ಹೇಳಿದೆ. ಇವರೂ ಮನೆಯಲ್ಲಿದ್ದರು."

"ನರಸಪ್ಪಯ್ಯ :— ಅವರು ಹೇಳಿದ್ದು ನನಗೆ ಕೇಳಿಸಲಿಲ್ಲ, ಮಹಾಸ್ವಾಮಿ. ತಾವು ಧರ್ಮಪ್ರಭುಗಳು, ಧರ್ಮಪ್ರಭುಗಳು."

ಸುಬೇದಾರರು :— ಶಾಸ್ತ್ರಿಗಳೆ! ಇದಕ್ಕೇನು ಹೇಳ್ತೀರಿ ?"

ನಾರಾಯಣ ಶಾಸ್ತ್ರಿಗಳು :— "ನಾನು ನನ್ನ ಧಡಿ ಗಂಟಲಲ್ಲಿ ಅರಚಿದ್ದೇ ಕೇಳಿಸಲಿಲ್ಲವೆಂದರೆ, ಅದು ನನ್ನ ಪ್ರಾರಬ್ಧಕರ್ಮ. ಅದಕ್ಕೆ ಅವರೇನು ಮಾಡಿಯಾರು ?"

ಸುಬೇದಾರರು :— (ಮೋಸವನ್ನು ಶಂಕಿಸಿ ಅದನ್ನು ತೋರ್ಪಡಿಸದೆ) "ಅವರು ಸಾವಿರ ಹೇಳಲಿ; ನರಸಪ್ಪಯ್ಯನವರೆ! ಧನಿಕರಾದ ನಿಮ್ಮಲ್ಲಿ

ನನಗೆ ಪೂರ್ಣವಾದ ನಂಬಿಕೆ. ನಿಮ್ಮಂಥವರೇ ನಮಗೆಲ್ಲರಿಗೂ ಬೆಂಬಲ. ನೀವು ಸುಳ್ಳು ಹೇಳೀರ? ನೀವು ಯಾರ ನೆಂಟರು?''

ನರಸಪ್ಪಯ್ಯ :— ''ನಾನೂ ಶಾಸ್ತ್ರಿಗಳೂ ಸ್ವಜನರೇ. ಆದರೆ ಬಂಧುಗಳಲ್ಲ.''

ಸುಬೇದಾರರು :— ''ಓಹೋ! ಹಾಗೆಯೇ, ನೀವು........ಅವರಿಗೆ ಬಂಧುಗಳಾಗುವುದು ಉಂಟೆ? ಉಂಟೆ? ನೀವೇ ಹೇಳಿ.''

ನರಸಪ್ಪಯ್ಯ :— ''ತಾವು ಧರ್ಮಪ್ರಭುಗಳು, ಧರ್ಮಪ್ರಭುಗಳು.''

ಸುಬೇದಾರರು :— ''ಅದೆಲ್ಲಾ ಸರಿ, ಯಾವುದಾದರೂ ಕಾರಣದಿಂದ ನಿಮಗೂ ಶಾಸ್ತ್ರಿಗಳಿಗೂ ವೈಮನಸ್ಯವಿತ್ತೋ?''

ನರಸಪ್ಪಯ್ಯ :— ''ಒಂದು ಪಂಚಾಯತಿಯಲ್ಲಿ ನನಗೆ ಅನ್ಯಾಯ ಮಾಡಿದ್ದರು, ಮಹಾಸ್ವಾಮಿ!''

ಸುಬೇದಾರರು :— ''ಇದಕ್ಕೇನು ಉತ್ತರ, ಶಾಸ್ತ್ರಿಗಳೆ?''

ನಾರಾಯಣ ಶಾಸ್ತ್ರಿಗಳು :— ''ಬಡವನ ಭೂಮಿ ಬಡವನಿಗೆ ಕೊಡಿಸಿ ಕೊಟ್ಟದ್ದೂ ಅನ್ಯಾಯವೆನ್ನುವುದಾದರೆ, ನಾನು ಅನ್ಯಾಯ ಮಾಡಿದ್ದುಂಟು. ಮಹಾಸ್ವಾಮಿ, ತಾವು ಅನುಮತಿ ಕೊಡುವುದಾದರೆ ನಾನು ಎಲ್ಲವನ್ನೂ ಅರಿಕೆ ಮಾಡುವೆನು.''

ಸುಬೇದಾರರ ಅನುಮತಿಯೂ ಆಯಿತು. ಶಾಸ್ತ್ರಿಗಳ ಅರಿಕೆಯೂ ಪೂರೈಸಿತು. ನರಸಪ್ಪಯ್ಯನು ತಲೆತಗ್ಗಿಸಿ ನಿಲ್ಲಬೇಕಾಯಿತು. ಆ ವೇಳೆಗೆ ಸರಿಯಾಗಿ ಗುಬ್ಬಿಯ ತಾಲ್ಲೂಕಿನ ಬಿಡಾರದಿಂದ ಶ್ರೀಮನ್ಮಹಾರಾಜರವರು ಕಳುಹಿಸಿದ ಸೇವಕರು ನಿರೂಪದೊಡನೆ ಬಂದರು. ಮಹಾಪ್ರಭುಗಳವರು ಅನುಗ್ರಹಮಾಡಿ ಕಳುಹಿಸಿದ್ದ ಹಣದ ಚೀಲ ಮುಂತಾದುವುಗಳನ್ನೂ, ಶಾಲು ಜೋಡಿಯನ್ನೂ ನಾರಾಯಣಶಾಸ್ತ್ರಿಗಳಿಗೆ ತಲುಪಿಸಬೇಕೆಂದೂ ಸುಬೇದಾರರಿಗೆ ಬಕ್ಷಿಯವರು ಬರೆದಿದ್ದರು. ಶಾಸ್ತ್ರಿಗಳು ಅವುಗಳನ್ನು ಸ್ವೀಕರಿಸಲು ಸಮ್ಮತಿಸದೆ ಹೋದರೆ, ಮಹಾಸ್ವಾಮಿಯವರು ಖಿಲ್ಲತ್ತು ಕಳುಹಿಸಿರುವುದು ವಿದ್ವತ್ಸಂಭಾವನೆಯಲ್ಲವೆಂದೂ, ಸತ್ಪ್ರಜೆಗಳಾದ ಶಾಸ್ತ್ರಿಗಳಿಗೆ ಸನ್ನಿಧಾನದ ಪ್ರೀತ್ಯಾದರಗಳ ಸಂಭಾವನೆಯೆಂದೂ ತಿಳಿಸಬೇಕೆಂದು ಕೂಡ ನಿರೂಪದಲ್ಲಿ

ಇದ್ದಿತು. ಮಹಾಪ್ರಭುಗಳವರು ಕೃಪಾಪೂರ್ವಕವಾಗಿ ಸಲ್ಲಿಸಬೇಕೆಂದು ಅಪ್ಪಣೆ ಮಾಡಿದ್ದ ಮಾಸಾಶನವನ್ನೂ ಶಾಸ್ತ್ರಿಗಳು ಸ್ವೀಕರಿಸಿ ಶಿಷ್ಯರ ಪೋಷಣೆಗೆ ವಿನಿಯೋಗಿಸಬೇಕೆಂದೂ, ಶಾಸ್ತ್ರಿಗಳಿಗೆ ತಿಳಿಸಬೇಕೆಂದು ಭಕ್ಷಿಯವರು ಸೂಚಿಸಿದರು.

ಸುಬೇದಾರರು ಆ ಸಂಗತಿಗಳನ್ನೆಲ್ಲಾ ತಿಳಿಸಿ ತಮ್ಮ ಸಂತೋಷವನ್ನು ಸೂಚಿಸಿದಾಗ ಶಾಸ್ತ್ರಿಗಳು ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಅವರು ಕಣ್ಣುಗಳಿಂದ ನೀರನ್ನು ಸುರಿಸುತ್ತ "ದೇವರಂಥ ದೊರೆಗಳು, ಪ್ರಜೆಗಳ ಪುಣ್ಯವೇ ಪುಣ್ಯ" ಎಂದರು. ಸ್ವಲ್ಪಕಾಲವಾದ ಮೇಲೆ ಸುಬೇದಾರರನ್ನು ಕುರಿತು, "ತಮ್ಮಿಂದ ಒಂದು ಉಪಕಾರವಾಗಬೇಕು. ಆ ಹಣವನ್ನೆಲ್ಲ ನರಸಪ್ಪಯ್ಯನಿಗೆ ಕೊಡೋಣವಾಗಲಿ. ಅವರ ಹುಲ್ಲಿನಿಂದ ಹಸುಗಳು ಸೊರಗುವುದು ತಪ್ಪಿತು. ಗೌಡನಿಂದ ಬಂದ ಹುಲ್ಲನ್ನು ಕಳುಹಿಸಬೇಕೆಂದಿದ್ದೆ. ಆದರೆ ಏನು ಕಾರಣದಿಂದಲೋ ಹುಲ್ಲು ಬರಲಿಲ್ಲ. ಗೋಗ್ರಾಸವನ್ನೊದಗಿಸಿದ ಭಾಗ್ಯ ಕಂಡದ್ದು ಅವರ ಹುಲ್ಲಿನಿಂದ. ಒಂದು ರಾಶಿ ಹಣ ಸುರಿದರೂ ಆ ದಿನ ಅವರಿಂದ ಗೋವುಗಳಿಗಾದ ತೃಪ್ತಿಗೆ ಅದು ಬೆಲೆಯಾಗುವುದಿಲ್ಲ." ಎಂದರು.

ಸುಬೇದಾರರು ನಕ್ಕು, "ಅವರಿಗೆ ಅಷ್ಟು ಹಣವನ್ನೂ ಕೊಡುವುದಕ್ಕೆ ಹಣವೇನು ಹುರುಳಿಯಕಾಳೆ?" ಎಂದರು. ಶಾಸ್ತ್ರಿಗಳ ಬಲವಂತದಿಂದ ಹುಲ್ಲಿನ ಬೆಲೆಗಿಂತ ಹೆಚ್ಚಾಗಿಯೇ ಹಣವನ್ನು ನರಸಪ್ಪಯ್ಯನವರಿಗೆ ಕೊಟ್ಟದ್ದೂ ಆಯಿತು. ಸುಬೇದಾರರಿಂದ ನರಸಪ್ಪಯ್ಯನವರಿಗೆ ಆ ಹಣದ ಜೊತೆಗೆ "ನೋಡಿಕೊಳ್ಳಿರಯ್ಯ, ಅವರ ಸ್ವಭಾವಕ್ಕೂ, ನಿಮ್ಮ ಸ್ವಭಾವಕ್ಕೂ ಇರುವ ಅಂತರವನ್ನು. ನಿಮಗೆ ಹಣದ ಕೊಬ್ಬು. ಜೋಕೆ, ಮುಂದೆ ಹೀಗೆ ಮಾಡಿದರೆ ಪರಿಣಾಮವೇ ಉಳಿಯಲಾರದು." ಎಂದು ಛೀಮಾರಿಯೂ ಆಯಿತು.

ತುಂಟಗುಮಾಸ್ತೆಯೊಬ್ಬನು ಇಲ್ಲದ ನೆವವನ್ನು ಕಲ್ಪಿಸಿಕೊಂಡು ಬಂದು ನರಸಪ್ಪಯ್ಯನ ಕಿವಿಯ ಹತ್ತಿರ— ಇತರರಿಗೂ ಕೇಳುವಂತೆ — "ಧರ್ಮಪ್ರಭುಗಳು, ಧರ್ಮಪ್ರಭುಗಳು" ಎಂದನು. ಸುಬೇದಾರರು ನಕ್ಕು ಗುಮಾಸ್ತನನ್ನು ಕುರಿತು "ಎಲಾ ಪಟಿಂಗ! ಚೋಟುದ್ದದ ಹುಡುಗ,

ನರಸಪ್ಪಯ್ಯನವರನ್ನ ಹಾಸ್ಯಮಾಡುತ್ತೀಯೆ. ನಿನಗೇಕೋ ದೊಡ್ಡವರ ಮಾತು?'' ಎಂದರು. ಮಾರನೆಯ ದಿನ ಸುಬೇದಾರರು ಶಾಸ್ತ್ರಿಗಳಿಗೆ ಮಾಡಿಸಿದ ಔತಣದ ಸವಿಯೂಟದ ಸಂಭ್ರಮದ ಮಧ್ಯದಲ್ಲಿ ನರಸಪ್ಪಯ್ಯ ನಿಗೆ ಜೀವನ್ಮೃತಾವಸ್ಥೆಯಾಯಿತೆಂದರೆ ಅತಿಶಯೋಕ್ತಿಯಲ್ಲ. ಅದೇ ದಿನ ಸಾಯಂಕಾಲದ ವೇಳೆಗೆ ಶಾಸ್ತ್ರಿಗಳು ಊರನ್ನು ಸೇರಿದರು.

ಕಾಮಾಕ್ಷಮ್ಮನವರು ಬಗೆಬಗೆಯ ಕಳವಳಗಳ ದೆಸೆಯಿಂದ ಹಿಂದಿನ ದಿನವೂ, ಆ ದಿನವೂ ಊಟ ಮಾಡಿರಲಿಲ್ಲ. ಅವರು ಮನೆಯ ಬಾಗಿಲಿಗೆ ಬೀಗವನ್ನು ಹಾಕಿ ಕೊಟ್ಟಿಗೆಗೆ ಹೋಗಿ ಹಣತೆಯ ದೀಪವನ್ನು ಗೂಡಿ ನಲ್ಲಿಟ್ಟು ಕಲ್ಯಾಣಿಯ ಬಳಿಗೆ ಸೇರಿದರು. ಸ್ವಲ್ಪಹೊತ್ತು ಆಲೋಚನಾ ಮಗ್ನರಾಗಿದ್ದು ಕೊನೆಗೆ ಕಾಮಾಕ್ಷಮ್ಮನವರು ದೈನ್ಯದ ನುಡಿಗಳಿಂದ "ನೋಡೆ ಕಲ್ಯಾಣಿ, ಅವರು ಬರಲೇ ಇಲ್ಲ. ನಿನ್ನಲ್ಲಿ ಅವರಿಗೆ ಪ್ರಾಣವಲ್ಲೆ, ಏನು ಮಾಡೋಣವೆ, ಬರಲೇ ಇಲ್ಲ'' ಎಂದರು. ಕಲ್ಯಾಣಿಯನ್ನು ಮೈದಡವಿ, ಸ್ವಪ್ನಪ್ರಪಂಚದಲ್ಲಿದ್ದಂತೆ ನಿಂತುಕೊಂಡರು.

ಆ ವೇಳೆಗೆ ಮನೆಯ ಬಾಗಿಲಿನ ಬೀಗಮುದ್ರೆಯನ್ನು ನೋಡಿಕೊಂಡು ಶಾಸ್ತ್ರಿಗಳು ಮನೆಗೆ ಕೊಂಚ ದೂರದಲ್ಲಿದ್ದ ಕೊಟ್ಟಿಗೆಗೆ ಬಂದರು. ತಮ್ಮನ್ನು ಕಂಡು ಸಂತೋಷವನ್ನು ಸೂಚಿಸಿದ ಹೆಂಡತಿಯೊಡನೆ ಪ್ರೀತ್ಯಾದರಗಳಿಂದ 'ಸರ್ವದೇವ ಮಯೋರಾಜಾ'—ಎಂಬ ವಾಕ್ಯವು ಸುಳ್ಳಲ್ಲ. ಮಹಾರಾಜರು ದೇವರಂಥವರು ನೋಡು. ಎಷ್ಟು ಕೃಪೆ, ಎಷ್ಟು ಪ್ರೀತಿ! ಖಿಲ್ಲತ್ತು, ಹಣ, ಶಾಲು ಜೋಡಿ ಎಲ್ಲಾ ಕಳುಹಿಸಿದ್ದಾರೆ. ಮಾಸಾಶನ ಅನುಗ್ರಹಿಸಿ ದ್ದಾರೆ. ಇನ್ನು ಮೇಲೆ ನೊರೆಹಾಲಿನ ಜೊತೆಗೆ ಹುಡುಗರಿಗೆಲ್ಲಾ ಸೊಗಸಾದ ಊಟ. ಸುಬೇದಾರರೂ ಅಷ್ಟೆ. ಒಳ್ಳೇ ಸಂಭಾವಿತರು. ಮಿಷ್ಟಾನ್ನ ಭೋಜನ ಮಾಡಿಸಿದರು. ಎಲ್ಲಾ ಹೇಳ್ತೀನೆ. ಇನ್ನು ಗೋಗ್ರಾಸಕ್ಕೂ ಆತಂಕವಿಲ್ಲ.'' ಎಂದರು. ಕಲ್ಯಾಣಿಯು ಮುಖವನ್ನೆತ್ತಿಕೊಂಡು ಅವರ ಕಡೆಗೇ ನೋಡು ತ್ತಿದ್ದಿತು. ಶಾಸ್ತ್ರಿಗಳುಎರಡು ಕೈಗಳಿಂದಲೂ ಕಲ್ಯಾಣಿಯ ಕೊರಳನ್ನು ತಬ್ಬಿ ಕೊಂಡು "ಇವಳು ಕತ್ತನ್ನು ಕೊಂಕಿಸಿ ನೋಡ್ತಾಳೆ. ಇವಳೇ ನಮ್ಮ ಕಾಮಧೇನು'' ಎಂದರು.

ಕಾಮಾಕ್ಷಮ್ಮನವರು "ಏನಾದರೂ ಹೇಳಿ. ಸದ್ಯ ಇನ್ನಾದರೂ ಅನ್ನ ಕಾಣಿಸಿದಿರಲ್ಲಾ! ಊರಿಗೆ ಬಂದು ಜೀವ ಉಳಿಸಿದಿರಲ್ಲಾ! ಇನ್ನು ಬದುಕಿದೆ." ಎಂದರು. ಶಾಸ್ತ್ರಿಗಳು "ಅಯ್ಯೋ ರಾಮ! ನೀನು ಊಟವೇ ಮಾಡಿಲ್ಲವೆ? ದೇವರೇ ಗತಿ!" ಎಂದು ಬಿರುಗಣ್ಣು ಬಿಟ್ಟುಕೊಂಡು ನಿಂತರು. ಸಂತೋಷದಿಂದ ಹಸಿವನ್ನೂ ಮರೆತಿದ್ದ ಕಾಮಾಕ್ಷಮ್ಮನವರು ನಕ್ಕುದನ್ನು ಪಾಡ್ಯಮಿಯ ಚಂದ್ರನು ಮೋಡದ ಮರೆಯಿಂದ ಇಣಿಕಿ ನೋಡಿ, ತಾನೂ ನಕ್ಕು ಎಲ್ಲೆಡೆಗಳನ್ನೂ ಬೆಳಗಿಸಿದನು.

# ಅಂಜನ

ಪುರುಷೋತ್ತಮರಾಯರ ಮನೆಯಲ್ಲಿ ಲಲ್ಲೆಯೋ ಲಲ್ಲೆ. ರಾಯರ ಹೆಂಡತಿಯಾದ ಲಕ್ಷ್ಮಮ್ಮನು ಅಂದು ಟೆನ್ನಿಸ್ ಚೆಂಡಾಟದ ಪಂದ್ಯದಲ್ಲಿ ಗೆದ್ದು, ಅದೇ ತಾನೆ ಮನೆಗೆ ಬಂದಿದ್ದಾಳೆ. ಮಾರನೆಯ ದಿನವೇ ವರಮಹಾಲಕ್ಷ್ಮೀ ವ್ರತ. ಆದಕಾರಣ ಆ ಹಬ್ಬದ ಹಿಂದಿನ ಸಾಯಂಕಾಲ ತಾನು ಆಟದಲ್ಲಿ ಗೆದ್ದುಬಂದುದಕ್ಕಾಗಿ ಆಕೆಗೆ ಹೆಚ್ಚಿನ ಸಂತೋಷ. ಆಟದಲ್ಲಿ ಹೆಸರುವಾಸಿಗೆ ಬಂದು ಜಂಭಪಡುತ್ತಿದ್ದ ಹೆಂಗಸನ್ನು ಸೋಲಿಸಿದುದಕ್ಕಾಗಿ ಹೆಚ್ಚಿನ ಹೆಮ್ಮೆ. ಲಕ್ಷ್ಮಮ್ಮನಿಗೆ ಆಪ್ತರಾಗಿದ್ದ ಹೆಂಗಸರಲ್ಲಿ ಹಲವರು ಅವರ ಮನೆಗೆ ಬಂದು ಅಭಿನಂದನವನ್ನು ಸೂಚಿಸುವ ಸಡಗರವು ರಾತ್ರಿ ಎಂಟೂವರೆ ಗಂಟೆಯುವರೆಗೂ ಬಳೆಯಿತು. ನಗುವಿನ ಮೇಲೆ ನಗು. ಕೋಲಾ ಹಲವೋ ಕೋಲಾಹಲ. ಒಬ್ಬರು "ನೋಡ್ರೀ ಲಕ್ಷ್ಮಮ್ಮ! ನಿಮ್ಮ ಮೇಲ್ಪಂಕ್ತಿಯಿಂದ ಅಜ್ಞಾನಿಗಳಾದ ಹೆಂಗಸರ ಕಣ್ಣಿಗೆಲ್ಲ ಅಂಜನ ಹಾಕಿ ದಂತಾಗಿದೆ" ಎಂದರು. ಮತ್ತೊಬ್ಬರು "ಅಬ್ಬ! 'ರೊಯ್ ರೊಟ್, ರೊಯ್ ರೊಟ್' ಅಂತ ಚೆಂಡು ಹೊಡೆದು ಕೆಡವಿಬಿಟ್ಟರು. ಎದುರು ಕಡೆ ಆ ಪ್ರಾಣಿಯ ಪಾಡು ಬೇಡ" ಎಂದರು. ಮಗದೊಬ್ಬರು, "ನಾಳೆ ಲಕ್ಷ್ಮೀದೇವಿಯ ಹಬ್ಬ. ಇವೊತ್ತು ಲಕ್ಷ್ಮಮ್ಮನವರು ಟೆನ್ನಿಸ್ ಆಟದಲ್ಲಿ ಗೆದ್ದರು. ಲಕ್ಷ್ಮೀದೇವಿ ಹಬ್ಬದ ಹಿಂದಿನ ದಿನ ಜಯಲಕ್ಷ್ಮಿಯನ್ನೇ ಮನೆಗೆ ಕರೆದುತಂದ ಹಾಗಾಯ್ತು." ಎಂದರು. ಇದೇ ಸರಣಿಯಲ್ಲಿ ಹೊರಟ ಬಗೆ ಬಗೆಯ ಹೊಗಳಿಕೆಯ ಮಾತುಗಳನ್ನು ಕೇಳಿ ಲಕ್ಷ್ಮಮ್ಮನೂ ಮತ್ತು ಅವಳ ಮಕ್ಕಳೂ ಹಿಗ್ಗಿದರು. ಅತ್ತ ಅಡಿಗೆಯ ಶಾಮಣ್ಣನೂ ಒಂದೆರಡು ರೂಪಾಯಿ ಸಂಬಳ ಹೆಚ್ಚಿಸಬೇಕೆಂದು ಕೇಳಲು ಅಂದೇ ತನಗೆ ಒಳ್ಳೆಯ

ಸಮಯವೆಂದುಕೊಂಡು ಮನಸ್ಸಿನಲ್ಲಿ ಭಾರಿ ಭಾರಿ ಮಂಡಿಗೆಗಳನ್ನೇ ಮಾಡಿಕೊಂಡನು. ಲಕ್ಷಮ್ಮನು ತನ್ನನ್ನು ಕೊಂಡಾಡಿದವರಿಗೆಲ್ಲ ಅವರವರ ಮಾತುಗಳಿಗೂ ಅಂತಸ್ತುಗಳಿಗೂ ತಕ್ಕಂತೆ ಉಪಚಾರದ ಉತ್ತರಗಳನ್ನು ಹೇಳಿ, ಕುಂಕುಮ ತಾಂಬೂಲಗಳಿಂದ ಸತ್ಕರಿಸಿ ಅವರನ್ನು ಬೀಳ್ಕೊಟ್ಟಳು.

ಆ ವೇಳೆಗೆ ಪುರುಷೋತ್ತಮರಾಯರು ಮನೆಯ ಬಳಿಗೆ ಬಂದರು. ಪಿತ್ರಾರ್ಜಿತವಾದ ಸ್ವತ್ತು ತಮ್ಮ ಗ್ರಾಮದಲ್ಲಿ ಯಥೇಷ್ಟವಾಗಿದ್ದ ಕಾರಣ, ಹೆಚ್ಚು ಸಂಪಾದನೆಯು ಅವಶ್ಯಕವಲ್ಲದಿದ್ದರೂ ಕಾಲವನ್ನು ಕಳೆಯಲು ಕಷ್ಟವಾಗದಂತೆಯೂ, ಹಿಂದೆಯೇ ತಾವು ಮದರಾಸು ನಗರಕ್ಕೆ ಹೋಗಿ ವೈದ್ಯಶಾಸ್ತ್ರದ ಪರೀಕ್ಷೆಯಲ್ಲಿ ಜಯಭೇರಿ ಹೊಡೆದುಕೊಂಡು ಬಂದಿದ್ದುದು ದಂಡವಾಗದಂತೆಯೂ ಇರಲೆಂಬ ಉದ್ದೇಶದಿಂದ ಅವರು ವೈದ್ಯವೃತ್ತಿಯನ್ನು ಅವಲಂಬಿಸಿ, ಬೆಂಗಳೂರು ನಗರದಲ್ಲಿ ಸ್ವಂತ ವೈದ್ಯಶಾಲೆಯನ್ನೇರ್ಪಡಿಸಿ ಬಹುಕಾಲದಿಂದ ಅದರ ಕೆಲಸವನ್ನು ನಿರ್ವಹಿಸುತ್ತಿದ್ದರು. ಅಂದು ರಾತ್ರಿ ಅವರು ಎಂದಿಗಿಂತಲೂ ಮುಂಚಿತವಾಗಿಯೇ ಮನೆಗೆ ಬಂದರು. ಕೆಲಸವನ್ನು ಬೇಗ ಪೂರೈಸಿದ್ದುದು ಅದಕ್ಕೆ ಕಾರಣವಲ್ಲ. ಅವರ ಮನಸ್ಸನ್ನಾವರಿಸಿದ್ದ ಗಭೀರ ಚಿಂತೆಯ ದೆಸೆಯಿಂದ ಎಂದಿನಂತೆ ಮನಸ್ಸಿಟ್ಟು ಕೆಲಸ ಮಾಡದೆ ಹೋಗಿದ್ದುದೇ ಅದಕ್ಕೆ ಕಾರಣ. ಅವರು ಮನೆಯ ಬಳಿಗೆ ಬರುವ ವೇಳೆಗೆ ಹೆಂಗಸರೆಲ್ಲ ಅದೇತಾನೇ ಹೋದರು. ಮನೆಯೊಳಗಿನಿಂದ ನಗುವಿನ ಹೊಳೆಯೇ ಹರಿಯುತ್ತಿದ್ದಿತು. ಲಕ್ಷಮ್ಮನು ಸಹಿಸಲು ಶಕ್ಯವಿಲ್ಲದಂತೆ ತೋರುತ್ತಿದ್ದ ಸಂತೋಷದಿಂದ ಹಿಗ್ಗುತ್ತ ಮಕ್ಕಳನ್ನು ಎಂದಿಗಿಂತ ಹೆಚ್ಚಾಗಿ ಮುದ್ದಿಸಿ ನಗಿಸುತ್ತ, ಮಕ್ಕಳ ಜೊತೆಗೆ ತಾನೂ ಮಗುವಾದಂತೆ ತೋರುವ ಹಾಗೆ ಲಲ್ಲೆಮಾಡುತ್ತಿದ್ದಳು.

ಆ ವೇಳೆಗೆ ಸರಿಯಾಗಿ ಪುರುಷೋತ್ತಮರಾಯರು ಮನೆಯೊಳಕ್ಕೆ ಬಂದರು. ಮಕ್ಕಳೆಲ್ಲರೂ ಒಂದೇ ಉಸಿರಿನಲ್ಲಿ, "ಅಣ್ಣ, ಅಣ್ಣ, ಇವೊತ್ತು ಅಮ್ಮನೇ ಆಟದಲ್ಲಿ ಗೆದ್ದುಬಿಟ್ಟಳಂತೆ. ಅಮ್ಮನೇ ಗೆದ್ದುಬಿಟ್ಟಳಂತೆ, ಅಣ್ಣ! ನೀನೇ ಕೇಳಣ್ಣ, ಬೇಕಾದರೆ" ಎಂದು ಗಟ್ಟಿಯಾಗಿ ಹೇಳಿದರು. ರಾಯರು ಉತ್ಸಾಹವೇನನ್ನೂ ತೋರಿಸದೆ "ಸಂತೋಷ, ಸಂತೋಷ" ಎಂದರು.

ಲಕ್ಷಮ್ಮನೂ ಸಹ "ನಾನು ಟೆನ್ನಿಸ್ ಮ್ಯಾಚಿನಲ್ಲಿ ಗೆದ್ದುದು ನಿಮಗೆ ಆಗಲೇ ತಿಳಿದುಹೋಗಿರಬೇಕು. ಅದಕ್ಕೇ ಇಷ್ಟು ಬೇಗ ಮನೆಗೆ ಬಂದುಬಿಟ್ಟದ್ದೀರಿ. ಇಷ್ಟು ಬೇಗ ಸುದ್ದಿ ಹರಡಿ, ಇಷ್ಟು ಬೇಗ ಯಾರು ಹೇಳಿಬಿಟ್ಟರೋ ಕಾಣೆ" ಎಂದು ಹೇಳಿ ನಕ್ಕಳು. ಅವಳ ಮನಸ್ಸಿನಲ್ಲಿ, ತಾನು ಆಟದಲ್ಲಿ ಗೆದ್ದ ಸಮಾಚಾರವು ಬೆಂಗಳೂರು ನಗರದ ಮೂಲೆ ಮೂಲೆಗೂ ಹರಡಿರಬೇಕೆಂಬ ನಿರೀಕ್ಷೆಯಿದ್ದಿತೋ ಹೇಗೋ! ರಾಯರು, ಯಂತ್ರದ ಬೊಂಬೆಯಂತೆ, "ಸರಿ ಸರಿ. ಸಂತೋಷ" ಎಂದುಕೊಂಡು ಹಜಾರದಿಂದ ತಮ್ಮ ಕೊಟಡಿಗೆ ಹೊರಟೇಹೋದರು.

ಅಸಮಾಧಾನದಿಂದ ಕೂಡಿ, ಲಕ್ಷಮ್ಮನೂ ರಾಯರ ಹಿಂದೆ ಹೊರಟಳು. ರಾಯರು ಕುರ್ಚಿಯ ಮೇಲೆ ಕುಳಿತುಕೊಳ್ಳುವುದಕ್ಕೆ ಮುಂಚಿತವಾಗಿಯೇ ಅವಳು "ಇಷ್ಟೊಂದು ಅನ್ಯಾಯವೆ ? ಎಲ್ಲರೂ ಹೊಗಳಿದರು; ನನಗೆ ಬಂದ ಭಾಗ್ಯವೇನಂತೆ! ನೀವು ಉಭಾ ಶುಭಾ ಅನ್ನಲಿಲ್ಲ. ನಿನ್ನ ಕಷ್ಟವೇನು, ಸುಖವೇನು ಅಂತ ಕೇಳಲಿಲ್ಲ. ಒಂದು ಸಂತೋಷದ ಮಾತಾಡಲಿಲ್ಲ. ಎಲ್ಲಾ ನನ್ನ ಗ್ರಹಚಾರ" ಎಂದಳು. ರಾಯರು ನಿಟ್ಟುಸಿರುಬಿಟ್ಟು, "ಚಿಂತೆ ಆವರಿಸಿದ ಮನಸ್ಸಿಗೆ ಒಂದೂ ಬೇಕಾಗುವುದಿಲ್ಲ. ಇಷ್ಟಕ್ಕೂ ಸುಖವಾಗಿಯೇ ಇರುವವರನ್ನು ಕಷ್ಟವೇನು ಸುಖವೇನು—ಎಂತ ಕೇಳಬೇಕೆ ?" ಎಂದು ಹೇಳಿ ನಕ್ಕು "ಜಯಭೇರಿ ಹೊಡೆದು ಬಂದಿದ್ದೀಯೆ. ನಾನೂ ಸಂತೋಷ ಸಂತೋಷವೆಂತ ಮೂರುಸಲ ಹೇಳಿದೆ. ಮಕ್ಕಳೊಡನೆ ಎರಡು ಸಲ; ನಿನ್ನೊಡನೆ ಒಂದು ಸಲ; ಮೂರು ಸಲ ಹೇಳಿದೆ. ಸಂತೋಷವೆಂತಲೇ ಹೇಳಿದ ಮೇಲೆ ಇನ್ನು ಸಂತೋಷದ ಮಾತಾಡಲಿಲ್ಲವೆಂದರೆ ಅರ್ಥವೇನು ?" ಎಂದು ಕೇಳಿದರು. ಲಕ್ಷಮ್ಮನೂ ನಕ್ಕು, "ಅಲ್ಲಾ, ಡಾಕ್ಟರ್ ಕೆಲಸ ಮಾಡುವ ನಿಮ್ಮ ರೋಗಿಗಳ ನಾಡಿ ಹೊಡೆತ ಎಣಿಸೋದು, ಎದೆಗುಂಡಿಗೆ ಬಡಿತ ಎಣಿಸೋದು, ಇವೆಲ್ಲದರಂತೆಯೇ, ಸಂತೋಷ ಸಂತೋಷವೆಂದ ಮಾತೂ ಎಣಿಕೆ ಲೆಕ್ಕಾಚಾರವಾಗಿಹೋಗಿದೆ. ಅಯ್ಯೋ ದೇವರೆ! ಹುರುಡಿಲ್ಲದೇ ಹುರುಪಿಲ್ಲದೇ ಸಂತೋಷ ಸಂತೋಷ—ಅಂತ ಮೂರಲ್ಲ ಮುವ್ವತ್ತು ಸಲ ಅಂದರೆ ತಾನೆ ಬಂದ ಭಾಗ್ಯವೇನೋ ಕಾಣೆ! ಆಕಾಶದ

ಕಡೆಗೆ ಪುರೋಹಿತರು ಬೆರಳು ತೋರಿಸಿ ಅರುಂಧತಿ ಕಂಡೆಯಾ ಅಂದರೆ, ಮದುವೆ ಹುಡುಗಿ ನೆಲದ ಕಡೆಗೆ ಮುಖ ತಿರುಗಿಸಿ, 'ಕಂಡೆ ಅರುಂಧತೀನ–' ಅಂದರೆ ಅರುಂಧತೀ ನಕ್ಷತ್ರ ಕಂಡಹಾಗಾಯಿತೆ? ನೀವೇ ಹೇಳಿ ಮತ್ತೆ. ನೀವೂ ಸಂತೋಷ ಸಂತೋಷ—ಅಂತ ಮೂರು ಸಲ ಹೇಳಿ ಆಣೆ ಬಿಡಿಸಿ ಬಂದಿರಿ. ಸ್ವಪ್ನ ಕಂಡು ಬೆಚ್ಚಿ ಎಚ್ಚರವಾದಾಗ ಮಾತನಾಡೋ ಹಾಗೆ ಮನಸ್ಸೆತ್ತಲೋ ನೋಟವೆತ್ತಲೋ ಆಗಿ, ಸಂತೋಷ, ಸಂತೋಷ, ಸಂತೋಷ—ಅಂದು ಒಳಕ್ಕೆ ಬಂದಿರಿ. ಈ ಮಾತು ಹೋಗಲಿ. ಇವೆಲ್ಲ ಅವರವರ ಅಕ್ಕರೆ, ಆಸ್ಥೆ. ಹೊಟ್ಟೆ ಹಸಿವಾಗುತ್ತಿದೆ, ಊಟಕ್ಕೇಳಿ; ಅದಿರಲಿ, ಬೆಂಡೋಲೆ ತಂದಿದ್ದೀರೇನು? ನಾಳೆ ಲಕ್ಷ್ಮೀದೇವಿ ಹಬ್ಬ. ಅದಕ್ಕಾಗಿ ಹೇಳಿದೆ. ಅಷ್ಟೇ" ಎಂದಳು. ರಾಯರು ಜೇಬಿನಿಂದ ಬೆಂಡೋಲೆಯನ್ನು ತೆಗೆದುಕೊಟ್ಟರು. ಲಕ್ಷಮ್ಮನ ಮುಖವು ಸಂತೋಷದಿಂದ ಅರಳಿ ದೊಡ್ಡದೊಂದು ತಾವರೆಯ ಹೂವಿನಂತಾಯಿತು.

ಲಕ್ಷಮ್ಮನು ಸಂತೋಷದಿಂದ ಹಿಗ್ಗುತ್ತ "ನನಗೆ ಗೊತ್ತಿತ್ತು, ನೀವು ಬೆಂಡೋಲೆ ತಂದೇ ತರುತ್ತೀರೀಂತ. ಹಳೆಯ ಜೋತೆಯನ್ನು ಮಾರಲು ನಾನು ಒಪ್ಪಿದ್ದರೆ, ಅದರಿಂದ ಬಂದ ಹಣದಿಂದ ನಿಮ್ಮ ಭಾರ ಸ್ವಲ್ಪಮಟ್ಟಿಗೆ ಕಡಮೆಯಾಗುತ್ತಿತ್ತು" ಎಂದಳು.

ಪುರುಷೋತ್ತಮರಾಯರು, "ನಿಜ. ನೀನು ಒಪ್ಪಿದರೆ ಇನ್ನೊಂದು ವಿಚಾರದಲ್ಲಿ ಸಹ, ನನ್ನ ಮನಸ್ಸಿನ ಭಾರ ಪೂರ್ತಿಯಾಗಿಯೇ ಕಡಮೆ ಯಾದೀತು. ಆದರೆ ನೀನು ಒಪ್ಪಬೇಕಲ್ಲ!" ಎಂದು ಉತ್ತರ ಹೇಳಿದರು.

ಲಕ್ಷಮ್ಮನು ನಗುತ್ತ, "ನಿಮ್ಮ ಮನಸ್ಸಿನ ಭಾರವೇನು ಬಂತು? ಅದು ಕಡಮೆಯಾಗುವ ಹಾಗಿದ್ದರೆ ನಾನು ಒಪ್ಪದೇ ಹೋದೇನೆ? ಅದೇನು ಹೇಳಿ, ಕೇಳೋಣ" ಎಂದಳು.

ರಾಯರು ಗಂಟಲನ್ನು ಸರಿಮಾಡಿಕೊಂಡು "ಅದೇ ನಮ್ಮ ರಂಗೂ ವಿಷಯ. ಅವನು ಶೇಷೂ ಮನೆಯಿಂದ ಈ ಊರಿಗೆ ಬಂದ ಮೇಲೆ ಅವನನ್ನು ಹಾಸ್ಟೆಲಿನಲ್ಲಿ ಬಿಡಬೇಕೆಂತ ನೀನು ಹಟ ಹಿಡಿದಿದ್ದೀಯೆ. ಅವನಿಗಿಂತ ಕೊಂಚ ಚಿಕ್ಕವರೂ ಒಬ್ಬಿಬ್ಬರು ಹಾಸ್ಟೆಲಿನಲ್ಲಿದ್ದಾರೆಂದು ಕೇಳಿದು

ದಾಗಿ ನೀನು ಹೇಳಿದುದನ್ನು ನಾನು ಒಪ್ಪುತ್ತೇನೆ. ಆದರೆ ಅವರೆಲ್ಲ ಪರಸ್ಥಳದವರು. ಯತ್ನವಿಲ್ಲದೆ ಹಾಸ್ಟೆಲಿನಲ್ಲಿದ್ದಾರೆ. ರಂಗೂ ಇನ್ನೂ ಚಿಕ್ಕವನು. ನಾನು ಒಂದು ದಿನವೂ ಅವನನ್ನು ಅಗಲಿರಲಾರೆ. ಇದರ ಮೇಲೆ ಇದೇ ಊರಿನಲ್ಲಿ ನಾವು ವಾಸವಾಗಿದ್ದೂ ಅವನನ್ನು ಹಾಸ್ಟೆಲಿನಲ್ಲಿ ಇಡುವುದು ನನ್ನ ಮನಸ್ಸಿಗೆ ಅವಮಾನ. ಆ ರೀತಿ ಮಾಡಿದ ಮೇಲೆ ನಾನಂತು ನಾಲ್ಕು ಜನರಲ್ಲಿ ತಲೆಯೆತ್ತಿಕೊಂಡು ತಿರುಗಲಾರೆ. ನನ್ನ ಮನಸ್ಸೇ ಇದರಿಂದ ಕೊರೆಯುತ್ತಿದೆ. ಸವತಿಯ ಮಗನನ್ನು ಮನೆಯಲ್ಲಿಟ್ಟು ಕೊಳ್ಳದೆ ಹೋದ ನಿಂದೆಯೂ ನಿನ್ನ ಮೇಲೆ ಹೊರುತ್ತದೆ" ಎಂದರು.

ಲಕ್ಷ್ಮಮ್ಮನು, "ನಿಮ್ಮ ಸಿಂಧೂರದ ಮಗನೇನು ರಾಮನಂತೆ ಕಾಡಿಗೆ ಹೋಗಬೇಕಾಗಿದೆಯೇನು? ನಿಮ್ಮ ಮಗನಿಗೂ, ನಮ್ಮ ಮಕ್ಕಳಿಗೂ ಸರಿ ಬರುವುದಿಲ್ಲ. ಎಷ್ಟೋ ಸಲ ಇದರ ಚರ್ಚೆಯಾಗಿದೆ. ಇನ್ನು ಸಾಕು. ನಿಮ್ಮ ಮಗನನ್ನು ಹಾಸ್ಟೆಲಿನಲ್ಲಿ ಬಿಡಿ. ಇಲ್ಲವೇ ನಮ್ಮನ್ನೇ ಬೇರೆ ಮನೆ ಯಲ್ಲಿಟ್ಟು ನೀವಿಬ್ಬರೂ ಸಂತೋಷದಿಂದ ಓಲಾಡುತ್ತ ಇಲ್ಲಿರಿ" ಎಂದಳು.

ರಾಯರು ನಿಟ್ಟುಸಿರುಬಿಡುತ್ತ, "ನೀನು ಹೀಗೆ ಭೇದದ ಮಾತು ಗಳನ್ನಾಡುವುದು ಸರ್ವಥಾ ಯುಕ್ತವಲ್ಲ ಅವನಿನ್ನೂ ಹಸುಳೆ; ಒಂದು ದಿನವೂ ನನ್ನನ್ನು ಬಿಟ್ಟಿರಲಿಲ್ಲ. ಈಗ ಸೋದರಮಾವನ ಮನೆಗೆ ಕಳುಹಿ ಸಿರುವುದೇ ನನ್ನ ಮನಸ್ಸಿಗೆ ಹ್ಯಾಗೋ ಇದೆ. ಅದೆಲ್ಲಾ ಹಾಗಿರಲಿ. ಸ್ವಂತ ಮನೆಯಿದ್ದೂ ಅವನನ್ನು ಹಾಸ್ಟೆಲಿಗೆ ಕಳುಹಿಸಲು ನನಗೆ ಅವಮಾನ. ಹೀಗೆ ಭೇದ ಮಾಡಬೇಡ" ಎಂದು ವಾದಿಸಿದರು.

ಲಕ್ಷ್ಮಮ್ಮನ ಮನಸ್ಸು ಕರಗಲಿಲ್ಲ. ಅವಳು ರೋಷದಿಂದ, "ಭೇದ ಮಾಡಬೇಕಾದ ಕಡೆ ಭೇದ ಮಾಡ್ಲೋದೇ. ಹೊರಗಿನವರನ್ನೆಲ್ಲ ನಮ್ಮವ ರಂತೆ ಕಾಣುವ ಬಗೆ ಹ್ಯಾಗೋ ಕಾಣೆ" ಎಂದಳು. ರಾಯರಿಗೂ ರೇಗಿತು. ಅವರು "ನಾನು ಮದುವೆಯಾಗುವುದಕ್ಕೆ ಮುಂಚೆ ನೀನೂ ಹೊರಗಿನವಳೇ ಆಗಿದ್ದೆ" ಎಂದರು. ಲಕ್ಷ್ಮಮ್ಮನು ಅಳುವುದಕ್ಕೆ ಪ್ರಾರಂಭಿಸಿದಳು. ದುಃಖದ ಆವೇಗವು ಕೊಂಚ ಕಡಮೆಯಾದ ಮೇಲೆ, ಗದ್ಗದ ಸ್ವರದಲ್ಲಿ "ಯಾ-ವು-ದು ತಪ್ಪೂ........ಯಾ-ವು-ದು ಸರಿ ಎಂಬ ಪರಿಜ್ಞಾನವೇ ನಿಮಗಿಲ್ಲ. ನಿಮ್ಮ

ಕಣ್ಣಿಗೆ ಯಾರಾದರೂ ಪುಣ್ಯಾತ್ಮರು—ಅಂಜನ—ಅಂಜನವಾದರೂ ಹಾಕ ಬಾರದೇ" ಎಂದಳು. ರಾಯರೂ "ನಾನು ಕೋರುವುದೂ ಅದನ್ನೇ. ಯಾರಾದರೂ ಪುಣ್ಯಾತ್ಮರು ನಿನ್ನ ಕಣ್ಣಿಗೂ ಅಂಜನವನ್ನು ಹಾಕಬಾರದೇ ಎಂತ" ಎಂದು ಹೇಳಿ ಜೋಡ್ಡದಾಗಿ ನಿಟ್ಟುಸಿರು ಬಿಟ್ಟರು ಆ ವೇಳೆಗೆ ಸರಿ ಯಾಗಿ ಅವರ ಸ್ನೇಹಿತರಾದ ಲಾಯರು ಗೋವಿಂದರಾಯರು ಬಾಗಿಲಿ ನಿಂದಲೇ, ಏನಯ್ಯ, ರಾಯಾ, ನಿಮ್ಮ ಮನೆಯವರು ಇವೊತ್ತು ಟೆನ್ನಿಸ್ ಮ್ಯಾಚಿನಲ್ಲಿ ಗೆದ್ದರಂತೆ. ನೀನು ಅವರ ಕಣ್ಣಿಗೆ ಅಂಜನ ಹಾಕಬಾರದೇ ಎನ್ನುತ್ತೀಯೆ. ರೇಗ್ತಾ ಇದ್ದೀಯೆ" ಎಂದುಕೊಂಡು ಬಂದರು. ಅವರು ಕೊಟಡಿಯ ಬಾಗಿಲಿನ ಬಳಿಗೆ ಬರುವ ವೇಳೆಗೆ ಲಕ್ಷಮ್ಮನವರು ಕೊಟಡಿ ಯೊಳಗಿನಿಂದ ಹೊರಬಿದ್ದರು.

ಗೋವಿಂದರಾಯರು, "ಎಂಥಾ ಮಡೆಯನಯ್ಯಾ ನೀನು! ಈ ದಿನ ಅವರು ಅಳುವಂತೆ ಮಾಡಿದ್ದೀಯೆ. ನಾಳೆ ಬೆಳಗಾದರೆ ಹಬ್ಬ. ಅವರು ಅಳುತ್ತಿದ್ದ ಹಾಗೆ ತೋರಿತು. ಇಲ್ಲಾ ಆನಂದಬಾಷ್ಪವೊ?" ಎಂದರು. ರಾಯರು ಬೇಸರದಿಂದ, "ಸಂಸಾರವೆಂದ ಮೇಲೆ ಏನಾದರೂ ಇದ್ದೇ ಇರುತ್ತಲ್ಲ" ಎಂದರು. "ಅದೇನೋ ಅವರಿಗೆ 'ಅಂಜನ ಹಾಕಬೇಕು. ಯಾರಾದರೂ ಪುಣ್ಯಾತ್ಮರು ಬರಬೇಕು' ಎಂದು ಏನೇನನ್ನೋ ಹೇಳುತ್ತಿದ್ದೆ. ಹಾರಾಡುತ್ತಿದ್ದೆ. ಅದೇನೋ ಮನೆಯೇ ಕಿತ್ತು ಹಾರಿಹೋಗುವ ಹಾಗೆ ಆಲಿ ಅರಚುತ್ತಿದ್ದೆ. ಅದೇನು ಸಮಾಚಾರ?" ಎಂದು ಕೇಳಿದರು.

ಪುರುಷೋತ್ತಮರಾಯರು ಆ ಸಮಯದಲ್ಲಿ ನಿಜ ಹೇಳುವುದು ಅನುಚಿತವೆಂದು ಭಾವಿಸಿ, "ಏನೂ ಇಲ್ಲಯ್ಯಾ. ನಮ್ಮ ಮನೆಯವರು ಈ ಟೆನ್ನೀಸ್ ಗಿನ್ನೀಸ್ ಆಡುವುದು ನನಗೆ ಸಮ್ಮತವಿಲ್ಲ. ಅವರಿಗೆ ಅದರಲ್ಲಿ ಪ್ರಾಣ. ಈ ಮರುಳಾಟವೇಕೆಂದು ನನಗೆ ತೋರಿತು. ಅವರ ಕಣ್ಣಿಗೆ ಯಾರಾದರೂ ಅಂಜನ ಹಾಕಬಾರದೆ ಎಂದೆ" ಎಂದು ಉತ್ತರ ಹೇಳಿದರು. ಗೋವಿಂದರಾಯರು ಗಹಗಹಿಸಿ ನಕ್ಕು "ಅಯ್ಯೋ ಹಾಳು ಪ್ರಪಂಚವೆ! ಇದೊಂದು ದೊಡ್ಡ ಹುಚ್ಚಾಸ್ಪತ್ರೆ ಕಣಯ್ಯ, ಅಂಜನ ಹಾಕಬೇಕಾದದ್ದು ಅವರ ಕಣ್ಣಿಗಲ್ಲ; ನಿನ್ನ ಕಣ್ಣಿಗೆ. ಗೊತ್ತಾಯಿತೇನಯ್ಯಾ, ರಾಯಾ!

ಪ್ರಪಂಚವೇ ನಾಗರಿಕತೆಯಲ್ಲಿ ವಾಯುವೇಗ ಮನೋವೇಗದಿಂದ ಮುಂದು ವರಿಯುತ್ತದೆ. ಸ್ತ್ರೀಯರು ತಮಗೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನ ಮಾನಗಳನ್ನು ಪಡೆಯುವ ಪ್ರಯತ್ನ ಮಾಡುತ್ತಿದ್ದಾರೆ. ಹೀಗಿರುವಾಗ ನೀನು ನಿಮ್ಮ ಮನೆಯವರನ್ನ ಅಡಿಗೇ ಮನೇಲಿ ಉಪ್ಪಿನಕಾಯಿ ಹಾಕ ಬೇಕೆಂದು ಬಯಸಿ ಗೋಳಾಡಿಸುತ್ತೀಯೆ. ಟೆನ್ನಿಸ್ ಆಡಕೂಡದೆಂತ ಅಂಕೆಯಿಟ್ಟು ಅಂಜನ ಹಾಕುತ್ತೀಯೆ. ನಮ್ಮ ಮನೆಯವರು ಟೆನ್ನಿಸ್ ಆಡಿದರೆ ಸಾಕಪ್ಪಾ ದೇವರೇ — ಅಂತ ನಾನು ಬಾಯಿ ಬಾಯಿ ಬಿಡುತ್ತೇನೆ. ಅದು ಅವರಿಗಿಷ್ಟವಿಲ್ಲ. ಅವರಿಗೆ ಸದಾ ವೀಣೆ ಹುಚ್ಚು; ಸಂಗೀತದ ಐಲು. ಅವರು ನನ್ನ ಸಂಗಡ 'ನಿಮ್ಮ ಕಣ್ಣಿಗೆ ನಿಜವಾಗಿಯೂ ಅಂಜನ ಹಾಕ ಬೇಕು, ನೋಡಿ. ನಾನು ಟೆನ್ನಿಸ್ ಬಡಿದು ಬಂದರೆ ಯಾವ ಉದ್ಧಾರವೋ ಕಾಣೆ. ನಾನೂ ನೀವೂ ಗಾಯನ ಸಮಾಜದ ಸಂಗೀತ ಕಚೇರಿಗಳಿಗಾದರೂ ಹೋದರೆ ಕಲಾಪೋಷಣೆಯಾದರೂ ಆದೀತು. ನನ್ನ ಕಳುಹಿಸಿಬಿಡುತ್ತೀರಿ, ನೀವು ಮಾತ್ರ ಬರೋದಿಲ್ಲ. ನಿಮ್ಮ ಕಣ್ಣಿಗೆ ಯಾರಾದರೂ ಅಂಜನ ಹಾಕ ಬಾರದೆ' ಎಂದರು. ಒಳ್ಳೆಯ ಪ್ರಪಂಚವಯ್ಯಾ ರಾಯ. ಮಣ್ಣ ಕಾಲು ನೀರಿಗಾಗದು. ಮರಗಾಲು ಬೆಂಕಿಗಾಗದು. ನಿಮ್ಮವರು ಟೆನ್ನಿಸ್ ಮ್ಯಾಚಿ ನಲ್ಲಿ ಗೆದ್ದದ್ದು ನನಗೇನೋ ಪರಮಸಂತೋಷ; ಅದನ್ನು ಅವರಿಗೆ ತಿಳಿಸಿ ಬಿಡಯ್ಯಾ, ರಾಯ; ಇನ್ನುಮೇಲಾದರೂ ಬುದ್ಧಿವಂತನಾಗಿದ್ದು ಅವರ ಟೆನ್ನಿಸ್ ಆಟಕ್ಕೆ ಪ್ರೋತ್ಸಾಹ ಕೊಡು. ಅವರು ಇನ್ನೂ ದೊಡ್ಡ ದೊಡ್ಡ ಮ್ಯಾಚುಗಳಲ್ಲಿ ಜಯಭೇರಿ ಹೊಡೆಯಲಿ. ಅವರ ಟೆನ್ನಿಸ್ ಆಟದ ಜಯ ಭೇರಿಯಿಂದ ನಿನಗೆ ಗೌರವ ಬರೋಹಾಗೆ ನಿನ್ನ ಕ್ವೈನಾ ಸೀಸೆಗಳಿಂದ ಗೌರವ ಬರೋದಿಲ್ಲ. ನಾನು ಮೈಸೂರಿಗೆ ಹೋಗಬೇಕು ಹೊತ್ತಾಯಿತು. ನಿನಗೊಂದು ಅಂಜನದ ಡಬ್ಬಿ ತಂದುಕೊಡಲೇನಯ್ಯಾ?" ಎಂದು ಹೇಳಿ ಹೊರಟುಹೋದರು. ರಾಯರು "ಪೆಡಂಭೂತದ ಹಾಗೆ ಬಂದು ಧೂಮ ಕೇತುವಿನ ಹಾಗೆ ಹೊರಟೇಹೋದ. ಎಷ್ಟು ಸಂತೋಷವಾಗಿದ್ದಾನೆ! ಇದ್ದರೆ ಹೀಗಿರಬೇಕು. ಈ ಭಾಗ್ಯ ನನಗಿಲ್ಲವಾಯಿತೇ!" ಎಂದು ಕೊಂಡರು.

೨

ಆ ದಿನ ರಾತ್ರಿ ಮನೆಯವರೆಲ್ಲರಿಗೂ ಗಾಢನಿದ್ರೆ ಬಂದಿದ್ದರೂ ತಮಗೆ ಮಾತ್ರ ನಿದ್ರೆ ಬಾರದೆಂದು ಪುರುಷೋತ್ತಮರಾಯರಿಗೆ ಪೇಚಾಟ. ಅವರ ಮನಸ್ಸಿನಲ್ಲಿ ಏನೋ ಯೋಚನೆ, ಏನೋ ಕಳವಳ; ತಮಗಿಂತ ವಯಸ್ಸಾದ ವರು ಎಷ್ಟೋ ಮಂದಿ ಎರಡನೆಯ ಮದುವೆ ಮಾಡಿಕೊಂಡು ಸುಖ ಸಂತೋಷಗಳಿಂದಿದ್ದರೂ ತಮಗೆ ಮಾತ್ರ ಆ ಸುಯೋಗವಿಲ್ಲದೆಹೋಯಿತೆಂಬ ಸಂಕಟ; ಹಣವಿದ್ದವರಿಗೆ ಸುಖವುಂಟೆಂಬುದು ಬಯಲುಭ್ರಾಂತಿಯೆಂಬ ತರ್ಕ; ಲಕ್ಷ್ಮಮ್ಮನಿಗೆ ರಂಗುವಿನಲ್ಲಿದ್ದ ದ್ವೇಷ ಬುದ್ಧಿಗಾಗಿ ರೋಷ; ಆ ರೀತಿ ಭೇದಬುದ್ಧಿ ಮಾಡುತ್ತಿದ್ದವಳು ತಾವು ಮನೆಯಲ್ಲಿಲ್ಲದಾಗ ಅವನನ್ನು ಮತ್ತೆಷ್ಟು ಹಿಂಸಿಸುತ್ತಿದ್ದಳೋ, ಎಷ್ಟು ಕಾಡುತ್ತಿದ್ದಳೋ ಎಂಬ ಶಂಕೆ; ತಮ್ಮ ಮೊದಲನೆಯ ಹೆಂಡತಿಯು ಮೃತಳಾದುದಕ್ಕೆ ಹಿಂದಿನ ದಿನ ರಂಗು ವನ್ನು ತಮಗೊಪ್ಪಿಸಿ "ಮಗುವನ್ನು ಕಾಪಾಡಿಕೊಳ್ಳಿ. ಇಬ್ಬರೂ ಸುಖವಾಗಿ ಬಾಳಿ. ನನಗಂತೂ ಲಭ್ಯವಿಲ್ಲ" ಎಂದು ಕಂಬನಿದುಂಬಿದುದರ ನೆನಪು— ಇವುಗಳೆಲ್ಲ ಒಟ್ಟುಗೂಡಿ ಪುರುಷೋತ್ತಮರಾಯರ ಹೃದಯವನ್ನೆ ಹಿಂಡ ಲಾರಂಭಿಸಿದುವು.

ಎಷ್ಟು ಪ್ರಯತ್ನಪಟ್ಟರೂ ಅವರಿಗೆ ನಿದ್ರೆಬಾರದೆ ಹೋಯಿತು. ಗಡಿ ಯಾರವು ಘಂಟೆ ಹೊಡೆದ ಪ್ರತಿಯೊಂದು ಸಲವೂ "ಇನ್ನು ನಿದ್ದೆ ಮಾಡಿ ಬಿಡಬೇಕು." ಎಂದು ಅವರು ನಿರ್ಧಾರ ಮಾಡಿಕೊಳ್ಳುವರು. ಒಡನೆಯೇ ಬಗೆಬಗೆಯ ಆಲೋಚನಾತರಂಗಗಳು ರಭಸದಿಂದ ನುಗ್ಗಿ ಅವರ ಮನಸ್ಸಿನ ನಿರ್ಧಾರದ ಮರಳು ಕಟ್ಟೆಗಳನ್ನು ಕೊಚ್ಚಿಹಾಕುವುವು. ಕೊನೆಗೆ ಬೆಳಗಿನ ಜಾವದ ಮೂರು ಘಂಟೆಯ ಹೊತ್ತಿಗೆ ಕೊಂಚ ನಿದ್ರೆ ಹತ್ತಿತು. ಐದು ಘಂಟೆಯ ವೇಳೆಗೇ ಅವರಿಗೆ ಎಚ್ಚರವಾಗಿಹೋಯಿತು. ಅಷ್ಟು ಮುಂಚಿತ ವಾಗಿ ಎಂದೂ ಏಳದವರು, ಎಂದೂ ಬೆಳಗಿನ ಹೊತ್ತು ಸಂಚಾರ ಹೊರಡ ದವರು, ಬಸವನಗುಡಿಯಿಂದ ಲಾಲ್‌ಬಾಗಿನವರೆಗೂ ಹೋಗಿ, ಅಲ್ಲಿಂದ ಮುಂದಕ್ಕೂ ಸರಸರನೆ ರಸ್ತೆಯಲ್ಲಿ ಹೊರಟುಬಿಟ್ಟರು. ದೇಹವೇನೋ ಮುಂದೆ ಮುಂದೆ ಹೋಗುತ್ತಿದೆ. ಮನಸ್ಸು ಚಿಂತಾಮಗ್ನವಾಗಿದ್ದ ಕಾರಣ,

ತಾವು ಎಷ್ಟು ವೇಗವಾಗಿ ನಡೆಯುತ್ತಿದ್ದರೆಂಬ ಅಂಶವಾಗಲಿ, ಅಥವಾ ತಾವು ಎಷ್ಟು ದೂರ ನಡೆದಿದ್ದರೆಂಬ ಅಂಶವಾಗಲಿ ಅವರ ಮನಸ್ಸಿಗೆ ಗೋಚರವಾಗಲಿಲ್ಲ.

ರಾಯರು "ಹುಚ್ಚಾಸ್ಪತ್ರೆ"ಯ ಬಳಿಗೆ ಹೋದಾಗ ಆ ಕಟ್ಟಡವನ್ನೇ ದೃಷ್ಟಿಸಿ ನೋಡಿ, 'ನಾನೂ ಒಂದು ದಿನ ಇಲ್ಲಿರಬೇಕಾದೀತೋ ಏನೋ! ಆ ಸುದಿನ ಎಷ್ಟು ಬೇಗ ಬಂದರೆ ಅಷ್ಟು ವಾಸಿ. ಮಿದುಳು ಕೆಟ್ಟುಹೋದ ಮೇಲಾದರೂ ಮನಸ್ಸಿನ ಹಿಂಸೆ ತಪ್ಪೀತು. ಅದೂ ಒಂದು ಉಪಕಾರವೇ' ಎಂದುಕೊಂಡರು. ಹಿಂದೆ ನಡೆದುದನ್ನೆಲ್ಲಾ ಸ್ಮರಿಸುಕೊಳ್ಳುತ್ತಿರುವಲ್ಲಿ ಒಂದು ದಿನ ತಾವು ಸುಮ್ಮನೆ ಮಾತಾಡಿಸುವುದಕ್ಕಾಗಿ "ಏನೋ ರಂಗೂ! ಬಹಳ ಬೇಗ ಎದ್ದುಬಿಟ್ಟೆಯಲ್ಲೋ" ಎಂದಾಗ ಆ ಹುಡುಗನು "ತಪ್ಪಾಯಿತು, ತಪ್ಪಾಯಿತು ಅಣ್ಣ" ಎಂದು ದೈನ್ಯದಿಂದ ಹೇಳಿದ್ದುದಕ್ಕೂ, ರಾಯರು ಆಗ ನಕ್ಕು 'ತಪ್ಪಾಯಿತು, ತಪ್ಪಾಯಿತು,—ಎಂದರೇನೋ?' ಎಂದು ಕೇಳಿದಾಗ ಅವನು ಮತ್ತಷ್ಟು ದೈನ್ಯದಿಂದ "ಇಲ್ಲ, ಇಲ್ಲ, ಅಣ್ಣ! ಇನ್ನುಮೇಲೆ ಹೀಗೆ ಮಾಡೋದಿಲ್ಲ" ಎಂದು ಉತ್ತರ ಹೇಳಿದ್ದಕ್ಕೂ ಕಾರಣವೇನೆಂಬುದು ರಾಯರ ಮನಸ್ಸಿಗೆ ಚೆನ್ನಾಗಿ ಅರ್ಥವಾಯಿತು. ರಾಯರು ಆಗ ನನಗಿಂತ ಹುಚ್ಚ ಇನ್ನೊಬ್ಬನುಂಟೇ? ನಾನು ಈ ಕಟ್ಟಡದಲ್ಲಿರುವುದಕ್ಕೆ ಈಗಲೇ ತಕ್ಕವನಾಗಿದ್ದೀನಿ. ಮನೆಯಲ್ಲಿ ಹಿಂಸೆ ಹೆಚ್ಚಿ, ಆ ಮಗು ಮಾತೆತ್ತಿದರೆ 'ತಪ್ಪಾಯಿತು' ಮಾತ್ತೆತ್ತಿದರೆ, 'ಇನ್ನುಮೇಲೆ ಮಾಡೋದಿಲ್ಲ' ಎಂದು ಹೇಳೋ ಸ್ಥಿತಿಗೆ ಬಂದಿದ್ದೂ, ನಾನೊಬ್ಬ ಹುಚ್ಚ, ಅದು ಮಗುವಿನ ಹೇಡಿತನವೆಂದುಕೊಂಡೆ. ತಾನು ಮಾಡಿದ್ದೆಲ್ಲಾ ತಪ್ಪೆ ಎಂದುಕೊಳ್ಳುವ ಸ್ಥಿತಿಗೆ ಅವನು ಬಂದಿದ್ದಕ್ಕೆ ಮೂಲಕಾರಣ ಊಹಿಸದೆ ಹೋದೆ. ಬೆಳ್ಳಗಿದ್ದುದೆಲ್ಲಾ ಹಾಲು ಎಂತ ನಂಬುವವರ ಗತಿಯೆಲ್ಲ ಹೀಗೆ ಎಂದುಕೊಂಡು, ಲಕ್ಷಮ್ಮನ ಮೇಲಿನ ರೋಷಕ್ಕೆ ಕಟಕಟನೆ ಹಲ್ಲುಕಡಿದರು. ಮೊದಲಿಗಿಂತ ಹೆಚ್ಚಿನ ವೇಗದಲ್ಲಿ ಮುಂದೆ ಸಾಗಿದರು. ಮೂರೇ ಮೂರು ನಿಮಿಷಗಳಲ್ಲಿ ಎರಡು ಫರ್ಲಾಂಗುಗಳ ದೂರ ನಡೆದರು. ಬಲಗಡೆಗೆ ಮೈಲಿಕಲ್ಲು ಸಿಕ್ಕಿತು. ಅಲ್ಲಿಂದ ಮುಂದೆ ಎರಡು ಫರ್ಲಾಂಗುಗುಗಳ ದೂರ ಹೋದರು. ಆ ವೇಳೆಗೆ ಷರಟಿನ ಎಡ

ತೋಳಿನ ಕೊನೆಯಲ್ಲಿ ಏನೋ ನೇತಾಡಿದಂತಾಯಿತು. ರಾಯರು ನೋಡಿ ಕೊಂಡರು. ಚಿನ್ನದ ಸರಪಣಿಗೆ ಜೋಡಿಸಿದ್ದ ಎರಡು ಗುಂಡಿಗಳಲ್ಲೊಂದು ತೂತಿನಿಂದ ಹೊರಗೆ ಬಂದು, ಷರಟಿನ ತೋಳಿನ ಕೊನೆಯಿಂದ ಕಳಚಿ ಕೊಂಡಿದ್ದುದು ಗೊತ್ತಾಯಿತು. ರಾಯರು "ಇದೂ ಕೂಡ ನನ್ನೊಡನೆ ಸಹಕರಿಸದೆ ಇಳಿಬಿದ್ದು ನೇತಾಡುತ್ತಿದೆ." ಎಂದುಕೊಂಡು ಮುಂದೆ ಹೊರಟರು. ಅಲ್ಲಿಗೆ ಒಂದು ಫರ್ಲಾಂಗಿನಷ್ಟು ದೂರದಲ್ಲಿ ಅವರು ತಮ್ಮೆದುರಿಗೆ ಬರುತ್ತಿದ್ದ ಇಬ್ಬರು ಹೆಂಗಸರನ್ನು ಕಂಡರು.

೩

ಅವರಿಬ್ಬರೂ ದೂರದ ಹಳ್ಳಿಯಿಂದ ಬೆಂಗಳೂರಿಗೆ ಹೋಗುತ್ತಿದ್ದ ಹೆಂಗಸರು. ಒಬ್ಬಳ ತಲೆಯ ಮೇಲೆ ಸೊಗಸಾದ ಹಳದಿ ಸೇವಂತಿಗೆಯ ಹೂಗಳು ತುಂಬಿದ್ದ ಮಂಕರಿ; ಮತ್ತೊಬ್ಬಳ ತಲೆಯ ಮೇಲೆ ಹುರುಳಿ ಕಾಯಿ ತುಂಬಿದ್ದ ಮಂಕರಿ. ಬೆಂಗಳೂರಿಗೆ ಹೋಗಿ ಮಾರಿಕೊಂಡು ಬರಲು ಅವರು ಅವುಗಳನ್ನು ತೆಗೆದುಕೊಂಡು ಹೋಗುತ್ತಿದ್ದರು. ಅವರಿಬ್ಬರಲ್ಲಿ ಒಬ್ಬಳ ವಯಸ್ಸು ಸುಮಾರು ನಲವತ್ತು ವರ್ಷಗಳು. ಮತ್ತೊಬ್ಬಳ ವಯಸ್ಸು ಇಪ್ಪತ್ತೆರಡು ವರ್ಷಗಳು. ಎಣ್ಣೆಗೆಂಪಿನ ಮೈಬಣ್ಣ. ರಕ್ತವನ್ನು ಚಿಮ್ಮು ವಂತಿರುವ ಮುಖಮಂಡಲ. ಆ ಮುಖಮಂಡಲವನ್ನು ಬೆಳಗುತ್ತಿರುವ ವಿಶಾಲವಾದ ಕಣ್ಣುಗಳು. ಅಂಗಾಂಗ ಸಾಮರಸ್ಯವಿರುವಂತೆ ಕಡೆದು ಮಾಡಿದಂತಿರುವ ಮಟ್ಟಸವಾದ ಮೈಕಟ್ಟು. ಹೀಗಿದ್ದ ವೆಂಕಟಮ್ಮನನ್ನು ನೋಡಿ ಪುರುಷೋತ್ತಮರಾಯರು, ತಮ್ಮ ಆಗಿನ ಸ್ಥಿತಿಯಲ್ಲಿ ಕೂಡ ಒಂದು ಕ್ಷಣ ನಿಂತು ಅವಳನ್ನು ತಲೆಯಿಂದ ಕಾಲಿನವರೆಗೂ ನೋಡಿ, "ಎಷ್ಟು ಚೆಲುವೆ! ಇವಳು ಇನ್ನೊಂದು ಸುತ್ತು ಕಪ್ಪಾಗಿದ್ದರೆ, ಯಾವುದೋ ದೇವಾಲಯದಲ್ಲಿ ಉತ್ತಮ ಶಿಲ್ಪಿ ಮಾಡಿಟ್ಟಿದ್ದ ದೇವತಾ ವಿಗ್ರಹಕ್ಕೆ ಜೀವಕಳೆ ಬಂದು ಅದು ನಡೆದುಬರುತ್ತಿದ್ದಂತೆ ತೋರುತ್ತಿತ್ತು" ಎಂದು ತಮ್ಮಲ್ಲಿ ತಾವು ಹೇಳಿಕೊಂಡು ಮುಂದಕ್ಕೆ ಹೋದರು. ಒಂದೆರಡು ಫರ್ಲಾಂಗುಗಳ

ದೂರ, ಮಾರ್ಗದ ಅಂಚಿನಲ್ಲಿಯೇ ಹೋಗಿ ನೋಡಿಕೊಂಡಾಗ ತಮ್ಮ ಚಿನ್ನದ ಗುಂಡಿಗಳು ಸರಪಣಿ ಸಮೇತ ಬಿದ್ದುಹೋಗಿದ್ದುದು ಗೋಚರವಾಯಿತು. ರಾಯರು "ರಾತ್ರಿ ಕಂಡ ಭಾವಿಗೆ ಹಗಲು ಬಿದ್ದಹಾಗಾಯ್ತು. ನಾನು ಹುಚ್ಚನೆಂಬುದಕ್ಕೆ ಎರಡನೆಯ ನಿದರ್ಶನ. ನೇತಾಡುತ್ತಿದ್ದ ಲಿಂಕ್ ತೆಗೆದಿಟ್ಟುಕೊಳ್ಳಬೇಡವೆ ?" ಎಂದುಕೊಂಡು ಹಿಂತಿರುಗಿ ಗುಂಡಿಗಳನ್ನು ಹುಡುಕುತ್ತ ನಡೆದರು.

ಪುರುಷೋತ್ತಮರಾಯರು ನಾಲ್ಕು ರಸ್ತೆಗಳು ಸಂಧಿಸುವ ಕಡೆ ಏರ್ಪಟ್ಟಿರುವ ಚೌಕದ ಬಳಿಗೆ ಬರುವಾಗ್ಗೆ, ಹೆಂಗಸರಿಬ್ಬರೂ ವಿಶ್ರಮಿಸಿಕೊಳ್ಳಲು ಮಂಕರಿಗಳನ್ನು ಕಲ್ಲು ಕಟ್ಟೆಯ ಮೇಲಕ್ಕಿಳಿಸಿ, ಪೂರ್ವ ದಿಕ್ಕಿನ ಕಡೆಗೆ ನೋಡುತ್ತ ನಿಂತಿದ್ದರು. ವೆಂಕಟಮ್ಮನು ಆನಂದೋತ್ಸಾಹದಿಂದ ಮೈಮರೆತವಳಂತೆ ತೋರುತ್ತ, "ಯವ್ವ ಯವ್ವಾ ! ನೋಡೇ ಹನುಮಕ್ಕಾ! ಮೋಡದ ತುಂಡು ಒಂದೊಂದೂ ಒಂದು ಚೆಂದ. ಆ ಕಡೆ ನೋಡು ಅರೆಚಣ ಮುಂಚೆ ಭೀಮಣ್ಣ ದುಶ್ಯಾಸನಪ್ಪನ ಕರುಳು ಬಗೆದಾಗ ತುಂಡು ತುಂಡು ಮಾಡಿ ದಿಕ್ಕಾಪಾಲಾಗಿ ಎಸೆದುಬಿಟ್ಟ ಮಾಂಸ ಚೂರುಗಳ ಹಂಗೆ, ಕೆಪ್ಪಟ್ಟೆ ಕೆಂಪಗೆ ರಕ್ತಾನೇ ಮುಕ್ಕಳಿಸಿದ್ದ ಮೋಡದ ತುಂಡುಗ್ಳೆಲ್ಲಾ, ಈಗ ಬಂಗಾರದಲ್ಲಿ ಮಾಡಿದ ಹತ್ತೀ ಮುದ್ದೆಗಳ ಹಂಗೆ ಬಾನಲ್ಲಿ ತೇಲಾಡುತ್ತವೆ. ಹೆಂಗೆ ಹೊಳೀತವೆ, ಹೆಂಗೆ ಬೆಳಗ್ತವೆ !, ದೇವಲೋಕದ ಬಂಗಾರದ ಹತ್ತೀ ಕಣೇ, ನಮ್ಮವ್ವ. ಇಲ್ಲೀ ಬಂಗಾರಕ್ಕೆ ಬೇರೆ ಆ ಕಾಂತಿಯಿಲ್ಲ. ಆ ಬಂಗಾರದ ಹತ್ತೀಲಿ ನೂಲು ತೆಗೆದು ಮಾಡಿದ ಸೀರೆ ಒಂದು ದಿನ ಉಡೋದಾದರೆ ಏಳು ಜನ್ಮದ ಕಷ್ಟಾ ತಡೀಬಹುದು" ಎಂದಳು. ರಾಯರು ಆ ಮಾತುಗಳನ್ನು ಕೇಳಿ, "ಒಡವೆಗೂ ಬೆಳ್ಳಿ ಬಂಗಾರಕ್ಕೂ ಆಸೆಪಡುವುದು ; ಕೈಗೆ ಸಿಕ್ಕಿದವರಿಗೆ ಹಿಂಸೆ ಮಾಡುವುದು ಇವೆರಡೇ ಹೆಂಗಸರ ಗುಣಗಳೋ ಏನೋ !" ಎಂದು ತಮ್ಮ ಮನಸ್ಸಿನಲ್ಲಿ ಹೇಳಿಕೊಂಡರು. ವೆಂಕಟಮ್ಮ ಮಂಕರಿಯನ್ನಿಳಿಸಿದ್ದ ಸ್ಥಳಕ್ಕೆ ಸೇರುವುದಕ್ಕೆ ಮುಂಚೆ, ಹಿಂದಕ್ಕೆ ತಿರುಗಿ ತಿರುಗಿ ನೋಡುತ್ತ ಹೋಗುತ್ತಿದ್ದುದನ್ನು ಕಂಡು, ಚಿನ್ನದ ಗುಂಡಿಗಳು ಅವಳಿಗೆ ಸಿಕ್ಕಿರಬೇಕು, ಆದರ ಸುಳಿವೆಲ್ಲಿ ತನಗೆ ತಿಳಿದೀತೋ ಎಂದು

ಅವಳು ಅಳುಕು ಮನಸ್ಸಿನಿಂದ ಹಾಗೆ ಹಿಂತಿರುಗಿ ನೋಡುತ್ತಿರಬೇಕು—ಎಂದು ರಾಯರ ಮನಸ್ಸಿಗೆ ಖಂಡಿತವಾಗಿದ್ದುದನ್ನು ಹೇಳಬೇಕಾದುದೇ ಇಲ್ಲ.

ರಾಯರು ವೆಂಕಟಮ್ಮನ ಸಮೀಪಕ್ಕೆ ಬಂದರೂ ಅವಳು ಗಮನವನ್ನೇ ಕೊಡದೆ, ಮೋಡಗಳನ್ನು ನೋಡುತ್ತಿದ್ದ ಬಗೆಯನ್ನು ಕಂಡು ಹಣದಿಂದ ಮಾತ್ರವೇ ಸುಖವೆಂದು ಭಾವಿಸಿರುವವರೆಷ್ಟು ಹುಚ್ಚರೆಂದುಕೊಂಡರು. ಬಾಲ್ಯದಲ್ಲಿಂದೋ ಓದಿದ್ದ "ಪ್ರೀತಿಸ್ನಿಗ್ಧೈರ್ಜನಪದವಧೂಲೋಚನೈಃ ಪೀಯಮಾನಃ" ಎಂಬ ಕಾಲಿದಾಸ ವಚನವು ನೆನಪಾಗಿ, ಅದರ ಸೊಗಸನ್ನು ಶುದ್ಧ ಮನಸ್ಸಿನಿಂದ ಅವರು ನಿಜವಾಗಿ ಅನುಭವಿಸಿದರು. ಆದರೂ ಮನಸ್ಸಿಗೇನೂ ಶಾಂತಿಯು ದೊರೆತಿರಲಿಲ್ಲ.

ರಾಯರು ವೆಂಕಟಮ್ಮನನ್ನು ಕುರಿತು "ನಿನ್ನ ಹೆಸರೇನಮ್ಮ?" ಎಂದು ಕೇಳಿದರು. ಅವಳು, "ನನ್ನ ಹೆಸರು ನಿಮಗ್ಯಾಕೆ ಸ್ವಾಮಿ? ಹೋಗಲಿ. ನನ್ನ ಹೆಸರು ಯಂಗಟಮ್ಮ" ಎಂದು ಉತ್ತರ ಹೇಳಿದಳು. ರಾಯರು, "ವೆಂಕಟಮ್ಮ ನನ್ನ ಚಿನ್ನದ ಗುಂಡಿ ಕೊಟ್ಟುಬಿಡಮ್ಮ" ಎಂದಕೂಡಲೆ, ವೆಂಕಟಮ್ಮನು ಹುಸಿಮುನಿಸಿನಿಂದ "ಒಳ್ಳೇ ದೊಡ್ಡ ಮನುಸರು, ಸ್ವಾಮಿ. ನಿಮ್ಮ ಗುಂಡಿ ನನ್ನ ತಾವ ಐತೇ ಅಂತ ಕನಸು ಬಿತ್ತೋ ಹೆಂಗೆ? ಹೋಗಿ, ಹೋಗಿ" ಎಂದಳು. ರಾಯರು ಅವೊತ್ತು ಸುಲಭವಾಗಿ ಕೋಪಿಸಿಕೊಳ್ಳುವ ಸ್ಥಿತಿಯಲ್ಲಿದ್ದರು. ಅವರು ನಿಜವಾಗಿಯೇ ಕೋಪಿಸಿಕೊಂಡು, ಈ ಕಳ್ಳಾಟ ನಾನೆಲ್ಲ ಬಲ್ಲೆ. ನೀನು ನಿನ್ನ ಕಳ್ಳತನವೆಲ್ಲಿ ಪತ್ತೆಯಾಯಿತೋ—ಎಂತ ಹಿಂದಕ್ಕೆ ತಿರುಗಿ ತಿರುಗಿ ನೋಡಿಕೊಂಡು ಬರುತ್ತಿದ್ದೆ. ಚಿನ್ನದ ಗುಂಡಿ. ಒಳ್ಳೆ ಮಾತಿನಲ್ಲಿ ಕೊಡು" ಎಂದು ಗರ್ಜಿಸಿದರು. ವೆಂಕಟಮ್ಮನು ನಗುತ್ತ, "ನಾನು ಮೋಡದ ಜೋಕು ನೋಡಾಕೆ ತಿರುಗಿ ತಿರುಗಿ, ನಿಂತು ನಿಂತು, ಬರ್ತಿದ್ದೆ. ಅಲ್ಲಿ, ಅಲ್ಲಿ, ಅಲ್ಲಿ ನೋಡಿ ಬುದ್ಧಿ. ಸ್ವಾಮಿ ಇನ್ನೇನು ಮೇಲೆ ಬರೋವರೊಳಗವನೆ. ಕೆಳಗೆ ಕಪ್ರಗಿರುವ ಮೋಡದ ಸಾಲೇ ಐತೆ. ದೇವಲೋಕದ ದೊಡ್ಡ ಕುಲಿಮೇ ಹಂಗೆ ಕಾಣಾಕಿಲ್ವಾ! ಗಾಳಿಗೆ ತೂರಿಕೊಂಡು ಹೋಗ್ತಾ ಇರೋ ಸಣ್ಣ

ಮೋಡಗಳ್ಳು, ನಿನ್ನೆ ಸರಿಹೊತ್ತಿನಾಗೆ ಮಳೆಯಾದ ಮೇಲೆ ಉಳಿದ ಕರಿ ಮೋಡಗಳ್ಳು ಗಾಳಿಗೆ ತೂರಿಕೊಂಡು ಹೋಗ್ತಾ ಕುಲಿಮೆ ಹೊಗೇ ಹಂಗೇ ಕಾಣ್ತವೆ. ಕೆಂಪಿನ ರಸದಲ್ಲಿ ಅದ್ದಿ ಬೆಳಗಿದ ಹಂಗೆ ತೋರ್ತಾರೆ ಸ್ವಾಮಿ ಮೇಲಕ್ಕೆ ಬಂದೇ ಬಂದ, ಆಕಾಶತಾಯಿಗಾ ಕುಂಕುಮದ ಬಟ್ಟಿನ ಹಂಗೆ'' ಎಂದು ಹೇಳಿ ಸೂರ್ಯನ ಕಡೆಗೆ ಕೈಮುಗಿದಳು. ರಾಯರು ಸ್ತಬ್ಧರಾಗಿ ಒಂದು ಕ್ಷಣ ಸುಮ್ಮನೆ ನಿಂತಿದ್ದು, "ವೆಂಕಟಮ್ಮ, ನಿನ್ನ ಮಾತೇ ವಿಚಿತ್ರ ವಾಗಿದೆ'' ಎಂದರು. ಹನುಮಕ್ಕ ತನ್ನ ಬಾಣವನ್ನೆಸೆದು, "ಕೇಳವ್ವ ಕೇಳು. ನಾನೇನು ತೆಲುಗಿನಾಗೆ ಹೇಳ್ತಿದ್ನಾ ? ಇವಳ ಬಗೆಯೇ ಇಚಿತ್ರ ಬುದ್ಧಿ, ಬೀದೀ ಮಾರೀ, ಮನೆ ಹೊಕ್ಕು ಹೋಗು—ಅಂದ ಹಾಗೆ, ಹೆರವರ ಮಗಾ ಹಟ್ಟೇಲಿಟ್ಕೊಂಡು ಪಾಡುಪಡ್ತಾ ಅವಳೆ'' ಎಂದಳು.

ರಾಯರು, ಅದೆಲ್ಲಾ ನನಗೆ ಬೇಡ. ವೆಂಕಟಮ್ಮ, ನನ್ನ ಗುಂಡಿ ದಾರೀಲಿ ಬಿದ್ದುಹೋಯಿತು. ನಿಂಗೆ ಸಿಕ್ಕಿರಬೇಕು. ಸುಮ್ಮನೆ ಕೊಟ್ಟು ಬಿಡು ಮಾತು ಬೆಳಸೋಕೆ ನನ್ನ ಮನಸ್ಸಿಗೆ ಸರಿಯಾಗಿಲ್ಲ—'' ಎಂದರು. ವೆಂಕಟಮ್ಮ "ತೋಳೇ ಇಲ್ಲದೋರಿಗೆ ಗುಂಡಿ ಬೇಕಾ ಸಾಮಿ ?'' ಎಂದುದನ್ನು ಕೇಳಿ, ಅವಳು ತಮ್ಮನ್ನು ಹಾಸ್ಯಮಾಡುವಳೆಂದು ಭಾವಿಸಿ "ಏನೆಂದೆ ?'' ಎಂದು ಗರ್ಜಿಸಿದರು. ವೆಂಕಟಮ್ಮ "ಅದೇಕೆ ಹಂಗಾಡೀರಿ ಸ್ವಾಮಿ ? ನಾನು ಶರಟು ಹಾಕಾಕಿಲ್ಲ. ನಮ್ಮ ಗಂಡಸರು ಶರಟು ಹಾಕಾಕಿಲ್ಲ. ನಮ್ಮ ಮಕ್ಕಳೆರಡೂ ಜುಬ್ಬಾ ಹಾಕ್ತವೆ. ಜುಬ್ಬಾ ತೋಳಿಗೆ ಗುಂಡಿ ಬೇಡ. ಅದಕ್ಕಂದೇ ನಾನು ತೋಳೇ ಇಲ್ಲದೋರಿಗೆ ಗುಂಡಿ ಬೇಕಾ ಅಂತ. ನಿಮ್ಮ ಗುಂಡಿ ನನಗೆ ಸಿಕ್ಕೈತೆ. ಆದ್ರೆ ಒಂದು, ಅಲ್ಲಾ ಅಲ್ಲಾ ಎರಡು, ನ್ಯಾಯ ಕೇಳಿ ; ಆಮ್ಯಾಲೆ ಆ ಗುಂಡೀ ಕೊಡ್ತೀನಿ. ಆದ್ರೆ ಮಾತ್ರ. ನೀವು ರೇಗಿದರೆ, ಕೂಗಿದ್ರೆ, ಕಣ್ಣುಬಿಟ್ರೆ ಬೇಳೆ ಬೇಯಾಕಿಲ್ಲ. ಅಲ್ಲಾ, ಈ ಹನುಮಕ್ಕಾ, ನಾನು ಹೆರವರ ಮಗಾ ತಂದು ಸಾಕಿದ್ದಕ್ಕೆ ನನ್ನ ಬಗೆ ಇಚಿತ್ರಾ ಅಂತಾಳಲ್ಲ. ಪ್ಲೇಗಿನಾಗ ಪೂಜಾರೆಪ್ಪ ತೀರಿಕೊಂಡ. ಆಸ್ತಿಯಿಲ್ಲಾ ಪಾಸ್ತಿಯಿಲ್ಲಾ. ಕೂಲೀನಾಲಿ ಮಾಡಿ ಮಗಾ ಸಾಕ್ತಿದ್ದ ತಾಯೂ ತೀರಿಕೊಂಡ ತಬ್ಬಲಿ ಮಗಾ. ಮನೇ ಮಗಾ, ಊರ ಮಗಾ

ಆಗಿ ಬಾಯಿ ಬಾಯಿ ಬಿಟ್ರು. ಒಬ್ಬರೂ ಒಬ್ದೇ ಹೋದಮೇಲೆ ನಾನೂ ಸಾಕಬೇಡವಾ? ನಮ್ಮನೇ ಮಕ್ಕಳ್ಹಂಗೇ ಸಾಕ್ತೇನಿ. ಅದರಾಗೆ ಇಚಿತ್ರ ಯೇನಂತೇ ಕೇಳಿ, ಸ್ವಾಮಿ'' ಎಂದಳು.

ತಾವಿದ್ದುದು ಭೂಲೋಕವೇ-ಎಂದು ರಾಯರಿಗೆ ಆಶ್ಚರ್ಯವಾಯಿತು. ಆ "ಇಚಿತ್ರದ" ಬಗೆಯ ಹೆಂಗಸಿರುವುದೂ ಸಾಧ್ಯವೆಂದು ಯಾರಾದರೂ ಆಣೆಯಿಟ್ಟು ಹೇಳಿದ್ದರೂ ಅವರು ನಂಬುತ್ತಿರಲಿಲ್ಲ. ರಾಯರು ಅಪ್ರತಿಭರಾಗಿ, "ನಿಮ್ಮ ಮನೆಯಲ್ಲಿ ಮಕ್ಕಳಿದ್ದಾರೇನು?'' ಎಂದರು. ಅವಳು "ಅವರೇ ಬುದ್ಧೀ ಅವರೆ. ರಾಮುಲಕ್ಷ್ಮಣರ ಹಂಗೆ ಇಬ್ಬರು ಅವರೆ. ಹಿರಿಯನಿಗೆ ೧೩ ವರ್ಷ, ಕಿರಿಯನಿಗೆ ೧೧ ವರ್ಷ. ಹನುಮಕ್ಕ ಹೆರವರ ಮಗ ಅಂದ್ಲಲ್ಲ ಆ ಮಗಾ ತುಂಬಾ ಕಾಯಿಲೆಯಾಗಿತ್ತು. ಬದುಕಿದ್ದೇ ಹೆಚ್ಚಾಯ್ತು. ನಮ್ಮ ನೆರೇಗ್ರಾಮದ ನೇಟೀ ವೈದ್ಯರು ಔಸ್ತಾ ಕೊಟ್ಟು ಗುಣಾ ಮಾಡಿದರು. ಕೈಯ್ಯಿನ ಬೆಳ್ಳೀಕಡಗಾ ಮಾರಿ ಅವರಿಗೆ ಹಣಾ ಕೊಟ್ಟೆ. ಅದೊಂದು ದೊಡ್ಡ ಕತೇ ಸ್ವಾಮಿ'' ಎಂದಳು. ರಾಯರಿಗೆ ಮೈಯೆಲ್ಲಾ ಕಿವಿಯಾಗಿ, ಅವರು "ನೀನು ಬಹಳ ಒಳ್ಳೆಯವಳು, ವೆಂಕಟಮ್ಮ. ನನಗೆ ನಿನ್ನಂಥಾ ಒಬ್ಬ ತಂಗೀ ಇರಬಾರದಾಗಿತ್ತೇ ಅನ್ನಿಸ್ತಾ ಇದೆ'' ಎಂದರು. ವೆಂಕಟಮ್ಮ ಗಳಗಳನೆ ಅತ್ತುಬಿಟ್ಟಳು. ಆ ಬಳಿಕ, "ನಾನೂ ಅಣ್ಣ ಇಲ್ಲದೋಳು. ಒಡಹುಟ್ಟೀ ಇಲ್ಲದೋಳು. ಎಲ್ರಿಗೂ ಅಣ್ಣ ತಮ್ಮಂದಿರೂ ಅಕ್ಕತಂಗಿಯವರೂ ಅವರೆ; ನನಗಿಲ್ಲ'' ಎಂದಳು. ರಾಯರೂ ಕಂಬನಿದುಂಬಿ ಸಮಾಧಾನ ಮಾಡಿಕೊಂಡು "ಕಡಗದ ಕತೆಯೇನು ವೆಂಕಟಮ್ಮ?'' ಎಂದು ಕೇಳಿದರು.

ವೆಂಕಟಮ್ಮ "ಅಣ್ಣಾ! ಆ ಹುಡುಗ ಕಾಯಿಲೆ ಬಿದ್ದ. ನಮ್ಮೂರಾಗೆ ಆಸ್ಪತ್ರೆ ಇಲ್ಲ. ಎಳ್ಳು ಹಾಕಿದರೆ ಸಿಡಿಯೋ ಜ್ವರ ಅವೊತ್ತು ಸೋಮವಾರ. ಯಾರೂ ಬಂಡಿ ಕಟ್ಕೊಲ್ರು. ನಮ್ಮ ಮನೆಯಾಗೆ ಬಂಡಿಯಿಲ್ಲ. ನಮ್ಮ ಗಂಡಸ್ರಿಗೆ ಕಾಲು ಉಳುಕಿ ಮಲಗಿದ್ರು. ಔಸ್ತಾ ಕೊಡಿಸೋಕೆ ಮಗಾ ಎತ್ತಿ ಕೊಂಡು ಬೆಂಗಳೂರು ಪ್ಯಾಟೆಗೆ ಹೊರಟೆ. ಸುದಾರಿಸ್ಕೊಂಡು ಹೋದ್ರೂ ಸಾಕಾಯ್ತು. ಹೊರಡೋ ಗಡಿಬಿಡೀಲಿ ಹಣ ಮರ್ತೆ. ಕಡಗಾ ಇಟ್ಕೊಂಡು

ಔಸ್ತಾ ಕೊಡಿ—ಅಂತ ಬೇಡ್ದೆ. ವೈದ್ಯ ಒಪ್ಲಿಲ್ಲ. 'ಮಗಾ ಮಲಗಿರ್ಲಿ. ಕಡಗಾ ಮಾರಿ ಹಣ ತರ್ತೀಸಿ'—ಅಂದೆ. ಆ ಮಾರಾಯ ಅದ್ಕೂ ಒಪ್ಪಲಿಲ್ಲ. ಮಗಾನೂ ತಕ್ಕೊಂಡೇ ಹೋಗು ಅಂದ. ಮಟಮಟ ಮಧ್ಯಾನ. ಮಗಾನು ಎತ್ತಿಕೊಂಡು ಇನ್ನೆರಡು ಷಾಪುಗ್ಳು ನೋಡ್ದೆ. ವೈದ್ಯರು ಬೀಗ ಹಾಕಿ ಮನೆಗೇ ಹೊರಟ್ಹೋಗಿದ್ರು. ಸರ್ಕಾರದ ಆಸ್ಪತ್ರೆಗ್ಳೂ ಆ ವೇಳೆ ಅವೇಳೆ ಹೊತ್ತಿನಾಗೆ ತೆರೆದಿರೋ ಹಂಗಿಲ್ಲ. ರೇಗಿತು. ಒಂದು ಗಾಡಿ ಮಾಡಿ ಮಗಾ ಕರೆದುಕೊಂಡು ನೇಟೀ ವೈದ್ಯರ ಮನೆಗೆ ನಮ್ಮೂರ ಪಕ್ಕದ ಹಳ್ಳೀಗೆ ಹೋದೆ. ಅವರು ಕರುಣವಾಗಿ ಕಂಡು ಹುಡಗ್ನ ಕಣ್ಣಿಗೆ ಅಂಜನ ಹಾಕಿ, ತಲೆನೋವು ಇಳಿಸಿ, ಕಸಾಯ ಹಾಕಿ ಕೊಡೋ ಸಾಮಾನು ಕೊಟ್ಟು ಮಾತ್ರೆ ಕೊಟ್ಟರು. ದೇಶ ಮಾಡಿದ ದೇವರು ರೋಗಕ್ಕೆ ಮೂಲಿಕೆ ಮಾಡಿಲ್ವಾ? ಸೀಮೇ ಇಲಾಯಿತಿ ಔಸ್ತಾನೇ ಬೇಡ ಅಂದ್ಕೊಂಡೆ. ನಮ್ಮ ದೇವರ್ಗೆ ಹರಕೆ ಮಾಡ್ಕೊಂಡೆ. ಗಾಡೀಲಿ ಮನೆಗೆ ಹೋದೆ. ಬಾಡಿಗೆ ಕೊಟ್ಟೆ. ಹುಡುಗಂಗೆ ಗುಣವಾದ ಮೇಲೆ ಕಡಗಾ ಮಾರಿ ನೇಟಿ ವೈದ್ಯರಿಗೆ ಹಣ ಕೊಟ್ಟೆ. ಅಣ್ಣಾ! ನಿಮ್ಮಂಥ ಗುಣವಂತರಾದ್ರೂ ವೈದ್ಯರಾಗಬೇಕು. ಆ ವೈದ್ಯಪ್ಪನಂತೋರು ಬೇಡ. ಸರ್ಕಾರದ ಆಸ್ಪತ್ರೆಗಾರಾ ಹೋಗುವಾ ಅಂದ್ರೆ ಪೇಟೆಪೇಟೇಲೂ ಬಾಗಿಲು ಹೊಚ್ಚಿತ್ತು'' ಎಂದಳು.

ರಾಯರು ತಾವೂ ವೈದ್ಯರೆಂಬುದನ್ನು ತೋರ್ಪಡಿಸದೆ, ''ವೆಂಕಟಮ್ಮ! ಎಲ್ಲ ವೈದ್ಯರೂ ಹಾಗಿರೋದಿಲ್ಲ ತಾಯಿ'' ಎಂದರು. ವೆಂಕಟಮ್ಮ, ''ಅದು ನಾನೂ ಬಲ್ಲೆ. ಈ ಹನುಮಕ್ಕ ಕೇಳ್ತಾಳೆ. ಸಂಪಾದನೆಗೆ ಕೂತಿರೋ ವೈದ್ಯರು ಇನ್ನೇನ್ಮಾಡ್ಬೇಕೂ ಅಂತ; ಎಂದೂ ಕಾಣದ ಪರಸ್ಥಳದೋರಿಗೆ ಸ್ಥಳಾ ಯಾಕೆ ಕೊಡ್ಬೇಕೂ ಅಂತ. ನಿನ್ನೆ ಅಲ್ಲ, ಮೊನ್ನೆ ಯಾರೋ ಮಳೀಲಿ ನೆಂದು ತೊಪ್ಪೆಯಾಗಿ ಒಬ್ಬರು ಹೆಂಗಸ್ರು ಬಂದರು. ಯಾರ ದಾದಮ್ಮ ಜೀವಾ ಅಂತ ಹಿಟ್ಟುಮಾಡಿ ಬಡಿಸಿ, ನಾನು ಅಡಿಗೇ ಕೋಣ್ಯಾಗ ಮಲಗಿ ಅವರಿಗೆ ಜಾಗಾ ಬಿಟ್ಟುಕೊಡಲಿಲ್ಲವಾ? ಸಂಪಾದನೆಗೆ ಬೆಳೀತಾ ಇರೋ ಈ ಹೊನ್ನುಹೂಗ್ಳನ್ನು ಕೂಡ, ಆಸೆಪಟ್ಟ ನಮ್ಮೂರ ಹೆಣ್ಮಕ್ಕಳಿಗೆ ನಾನೇ ಕಟ್ಟಿ ಮುಡಿಸಿಲ್ಲವಾ, ಎಷ್ಟೋ ಸಲ?'' ಎಂದಳು.

ರಾಯರು, "ವೆಂಕಟಮ್ಮ! ಅದೇನೋ ನ್ಯಾಯಾ ಕೇಳಬೇಕು ಅಂದೆ. ಅದೇನು ನ್ಯಾಯ?" ಎಂದರು. ವೆಂಕಟಮ್ಮ, "ಹೇಳ್ತೀನಿ ಅಲ್ಲಾ ಅಣ್ಣ! ನನಗನಿಸ್ತದೆ. ನಮ್ಮ ನೇಟಿ ವೈದ್ಯಪ್ಪ ನಮ್ಮ ಮಗೂಗೆ ಕಣ್ಣಿಗೆ ಅಂಜನಾ ಹಾಕಿದ್ಹಂಗೆ, ಭಗವಂತ ಪಟ್ಣವಾಸದಾಗೇ ಹಳ್ಳೀಗಳಾಗೇ ಇರೋರಿಗೆಲ್ಲಾ ಅಂಜನಾ ಹಾಕಿ ನರಮನುಸರೆಲ್ಲಾ ಒಂದೇ ಮನೆ ಜನದ್ಹಂಗಿರೋ ಹಂಗೆ ಮಾಡಬಾರದಾ—ಅಂತ" ಎಂದಳು. ಆ ಕೂಡಲೇ ಚಿನ್ನದ ಗುಂಡಿಗಳನ್ನು ಸರಪಣಿಯೊಡನೆ ರಾಯರಿಗೆ ಕೊಟ್ಟು, "ನ್ಯಾಯದ ಮಾತಾ ಕೇಳಿ ಅಣ್ಣ. ನೀವು ನನ್ನ ಕಳ್ಳತನ ಮಾಡ್ದೋಳು ಅನ್ನಬಹ್ದೋ? ಅದು ಮೊದಲನೆಯ ನ್ಯಾಯ" ಎಂದಳು. ರಾಯರು, "ನಾನು ದುಡುಕಿದೆ. ತಪ್ಪಾಯ್ತು, ವೆಂಕಟಮ್ಮ" ಎಂದರು. ವೆಂಕಟಮ್ಮ "ಅಣ್ಣಾ ಅಣ್ಣಾ, ನಿಮ್ಮ ಧರ್ಮ. ಹಂಗನ್ನಬೇಡಿ. ನಾನೆಷ್ಟರೋಳು? ನೀವು ದೊಡ್ಡೋರು. ತಪ್ಪಾಯ್ತು ಅನ್ನಬಾರದು. ನಂದೇ ತಪ್ಪಾಯ್ತು. ಇನ್ನು ಎರಡನೇ ನ್ಯಾಯದ ಮಾತು. ಕೇಳಿ, ಅಣ್ಣ! ತಾಯಿ ತಂದ ತೀರಿಕೊಂಡ ಆ ಮಗೂ ಮಾತು ಏಳಿದೆನಲ್ಲಾ! ನಮ್ಮ ಮನೆ ಹುಡುಗರೆರಡಿವೆ. ನಮ್ಮ ಮನೆ ಹುಡುಗರೆರಡೂ ಬಲೇ ತುಂಟ ಹೈಕಳು. ಸದಾ ಯಾಜ್ಯ. ಸದಾ ಹೊಡೆದಾಡೋದು. ಸದಾ ಬೈದಾಡೋದು. ನಾನು ಹೇಳ್ದೆ. ನೀವು ರಾಮ-ಲಕ್ಷ್ಮಣರ್ಹಂಗೆ ಪಿರೀತಿಯಾಗಿರಬೇಕು. ನವರಾತ್ರಿ ಹಬ್ಬದವರೆಗೂ ಜಗಳಾ ಆಡ್ದೇ ಪಿರೀತಿಯಾಗಿದ್ದರೆ ಮೈಸೂರಿಗೆ ದಸರೆಗೆ ಹೋಗಿ, ಅಲ್ಲಿರೋ ನಮ್ಮಪ್ಪ ನಮ್ಮ ದೊರೆಯೋರನ್ನ ಕಣ್ತುಂಬ ನೋಡಿ ಕೈಮುಗ್ದು ಬರುವಾ ಅಂತ. ಅವರಿಬ್ರೂ ಒಪ್ಪಿ, ಒಂದು ದಿನಾನೂ ಜಗಳಾ, ಯಾಜ್ಯ, ಯವಾರಾ ಮಾಡ್ದೆ ಪಿರೀತಿಯಾಗವರೆ. ನಾನು ಆಗ್ಲೇ ಹೂವು, ಹಣ್ಣೂ, ಕಾಯೀ ಮಾರಿ ಹಣ ಕೂಡ್ಸಿಟ್ಟದ್ದೀನಿ. ಹಣ ಇನ್ನೂ ಕೊಂಚ ಸೇರ್ಬೇಕು. ನಮ್ಮ ಗಂಡಸರು "ಈ ಸಲ ದಸರೇಗೆ ಬೇಡ. ನಾನು ಸಾಲ ತೀರ್ಸೋಕೆ ಆ ಹಣ ತತ್ತಾ" ಅಂತ ಹೇಳ್ತಾರೆ, ಬೈತಾರೆ, ನಾನು ಮಾತಿಗೆ ತಪ್ಪಬಹುದಾ ಅಣ್ಣ?" ಎಂದಳು.

ರಾಯರು ಹರ್ಷಿಸಿ, ''ಇಲ್ಲ ವೆಂಕಟಮ್ಮ, ಮಾತಿಗೆ ತಪ್ಪದೆ ಕರೆದು ಕೊಂಡು ಹೋಗು. ಹಣ ಸಾಲಕ್ಕೆ ಕೊಡಬೇಡ'' ಎಂದರು. ವೆಂಕಟಮ್ಮ ''ಅದೀಗ ಸೈ, ನಾನು ಹೇಳೋದೂ ಅದೇ. ನನ್ನ ಕಣ್ಣಿನ ಬೊಂಬೆಗಳ ಹಂಗೆ ಪಿರೀತಿಯಿಂದ ಸಾಕಿದ್ದೀನಿ. ನಮ್ಮ ಗಂಡಸರೆಲ್ಲಿ ನೊಂದ್ಕೊಂಡಾರೋ ಅಂತ ದಿಗಿಲು. ಆ ದಿಗಿಲಿಗಿಂತ ಅವೆರಡರ ಮೇಲೂ ಪಿರೀತೀನೇ ಹೆಚ್ಚಾಗೈತೆ. ನನ್ನ ಕಣ್ಣಾಣೆಗೂ ನಾನು ಸುಳ್ಳಾಡೋಕಿಲ್ಲ'' ಎಂದಳು. ರಾಯರು ತಮ್ಮ ಮಗ ರಂಗುವಿಗೂ ತಾಯಿ ಬದುಕಿದ್ದರೆ ಅವನಿಗೂ ಲಾಲನೆ ಪಾಲನೆಗಳು ಸರಿಯಾಗಿ ದೊರೆಯುತ್ತಿದ್ದುವೆಂದುಕೊಂಡು, ''ವೆಂಕಟಮ್ಮ! ತಾಯಿಯರು ಇರಬೇಕಾದದ್ದೇ ಹಾಗಮ್ಮ. ನಮ್ಮ ಮಕ್ಕಳಲ್ಲ, ದೇವರ ಮಕ್ಕಳು-ಎಂತ ಭಾವಿಸಿಯೇ ಪ್ರೀತಿಯಿಂದ ಸಾಕಬೇಕಾದದ್ದೇ ಧರ್ಮ. ನೀನು ಬಹಳ ಗುಣವಂತೆ'' ಎಂದರು.

ವೆಂಕಟಮ್ಮ, ''ಅವೆರಡೂ ದೇವತೆ ಮಕ್ಕಳು. ನಾನು ಪಿರೀತಿಯಿಂದ ಸಾಕ್ತಿದ್ದೀನಿ. ಸ್ವರ್ಗದಲ್ಲಿರೋ ಆ ದೇವತೆ—ನನ್ನ ಸವತಿ—ಅಲ್ಲಿ ಕೂಡ "ಸೈ"—ಅನ್ನೋ ಹಂಗೆ ಸಾಕ್ಬೇಕೂ ಅಂತ ಆಸೆ. ಅವಳು ನನ್ನ ಅಕ್ಕ; ಈಗ ಸ್ವರ್ಗದಲ್ಲಿರೋ ದೇವತೆ. ಅವೆರಡೂ ನನ್ನ ಸವತಿ ಮಕ್ಕಳು. ತಾಯಿ ಇಲ್ಲದ ತಬ್ಬಲಿ ಮಕ್ಕಳಿಗೆ ನಾನು ತಾಯಿಯಾ ಹಂಗೇ ಇದ್ದು ಸಾಕಬೇಡವಾ ಅಣ್ಣಾ?'' ಎಂದಳು.

ರಾಯರು ಅಪ್ರತಿಭರಾಗಿ, ''ಯಾವ ಜಾತಿಯವರಾದರೇನು, ಗುಣ ವಿದ್ದವರಲ್ಲಿ ದೈವಸಾನ್ನಿಧ್ಯ'' ಎಂದುಕೊಂಡರು.

# ಕಲಾಭಿಮಾನದ ಕಿರೀಟ

ವೆಂಕಟರಾಯರು ತಮಗೆ ಬಂದಿದ್ದ ಕಾಗದವನ್ನು ಮತ್ತೆ ಮತ್ತೆ ಓದಿಕೊಂಡರು. ಅವರು ಅದನ್ನು ಓದಿಕೊಂಡಷ್ಟೂ ಅವರ ಚಿಂತೆಯೂ ಆತಂಕವೂ ಹೆಚ್ಚಿದುವು. ಕೊನೆಗೆ ಅವರು ಸ್ವಲ್ಪಹೊತ್ತು ಚಿಂತಾಕ್ರಾಂತರಾಗಿ ಸುಮ್ಮನೆ ಕುಳಿತಿದ್ದು, ಮತ್ತೆ ಅದೇ ಕಾಗದವನ್ನು ಓದಿಕೊಳ್ಳುತ್ತಿರುವಷ್ಟರಲ್ಲಿ ಅವರ ಹೆಂಡತಿ ನಾಗಮ್ಮನವರ ಸವಾರಿಯೇ ಅಲ್ಲಿಗೆ ಚಿತ್ತೈಸಿತು. ನಾಗಮ್ಮನವರು ರಾಯರ ಸ್ಥಿತಿಯನ್ನು ನೋಡಿ ಕೊಂಚ ಕಳವಳಪಟ್ಟು "ಮುಖವೇಕೆ ಹೀಗಾಗಿದೆ? ಏನು ಕಾಗದ? ಎಲ್ಲಿಂದ ಬಂತು? ಕೆಟ್ಟ ಸುದ್ದಿಯೇನಾದರೂ ಬಂದಿದೆಯೆ? ಹೀಗಿದೆ ಮುಖ!" ಎಂದರು.

"ಕೆಟ್ಟ ಸುದ್ದಿಯೇನೂ ಬಂದಿಲ್ಲ. ನಾನು ಶುದ್ಧ ಅವಿವೇಕದ ಕೆಲಸ ಮಾಡಿಕೊಂಡೆ. ನನ್ನ ಕಾಗದದಿಂದ ಸಾಹೇಬರು ವಿಷಾದಿಸುವಂತೆ ಮಾಡಿಬಿಟ್ಟೆ. ಇರಲಿ. ಈ ದಿನವೇ ಬೆಂಗಳೂರಿಗೆ ಪ್ರಯಾಣಮಾಡಿ ಅವರನ್ನು ಕಂಡುಬರಬೇಕು."

"ಹಾಗಾದರೆ ಸಾವಂದುರ್ಗದ ಪ್ರಯಾಣ?"

"ಅದು ನಿಂತ ಹಾಗೆ. ತಿಳಿದೇ ಇದೆ. ಸಾಹೇಬರು ವಿಷಾದಪಡುವಂತೆ ಮಾಡಿದ್ದೇನೆ. ಅವರಿಗೆ ಸಮಾಧಾನವಾಗುವ ಹಾಗೆ ಮಾತನಾಡಿ ಬಂದ ಮೇಲೆ ಸಾವಂದುರ್ಗದ ಮಾತು."

"ಲಕ್ಷಣವಾಯಿತು. ನನ್ನ ಮಾತೂ ಕೊಂಚ ಕೇಳಿ. ನಿಮ್ಮ ಮುಖ ನೋಡಿ ಯಾರಿಗೆ ರೋಗವೆಂತ ಕಾಗದ ಬಂದಿದೆಯೋ ಏನೋ ಅಂತ ಗುಂಡಿಗೆಯೇ ಹಾರಿಹೋಯಿತು. ನಿಮ್ಮ ಸಾಹೇಬರಿಗೆ ವಿಷಾದವೆಂತ ಕೇಳಿ ಕೊಂಚ ಸಮಾಧಾನ ಮಾಡಿಕೊಂಡೆ. ಬೆಂಗಳೂರಿಗೆ ಹೋಗಿ. ಬೇಡವೆಂದು

ಇಲ್ಲಿ ಯಾರೂ ಹೇಳಿಲ್ಲ. ನಿಮ್ಮ ಮಕ್ಕಳಿಗೂ ನಂಗೂ ಒಳ್ಳೇ ಸೇಬು ತಂದು ಕೊಡಿ. ಆದರೆ, ಇವೊತ್ತಿನ ಪ್ರಯಾಣ ಮಾತ್ರ ಮರೆಯಬೇಡಿ."

"ಸಾಹೇಬರಿಗೆ ವಿಷಾದವಾಗುವ ಹಾಗೆ ಮಾಡಿರುವಾಗ ಸಾವಂ ದುರ್ಗಕ್ಕೆ ಬಂದು ಲಲ್ಲೆ ಹೊಡೆಯೋದುಂಟೆ? ಅವರಿಗೆ ನನ್ನ ಕಂಡರೆ ಪ್ರಾಣ."

"ಒಳ್ಳೇ ಸಾಹೇಬರು, ಒಳ್ಳೇ ವಿಷಾದ. ಇವೊತ್ತು ಹೊರಡದೆ ನಾಳೆ ಹೋದರೆ ಮೂಗು ಮುಕ್ಕಾಗೋದೇನೋ ಕಾಣೆ. ನಾನು ವಿಷಾದಪಟ್ಟು ಅಳುವ ಹಾಗೆ ಕೂಡ ಎಷ್ಟೋ ಸಲ ಮಾತಾಡಿದ್ದೀರಿ. ನಾಳೆ ಬೆಂಗಳೂರಿಗೆ ಹೊರಡಿ; ನಾನು ಬೇಡವೆಂದರೆ ಕೇಳಿ."

"ಅದು ಸಾಧ್ಯವಿಲ್ಲ."

"ಇಲ್ಲಿ ಕೇಳಿ ಕೊಂಚ. ಹುಡುಗರೆಲ್ಲ ಕುಣೀತಾ ಇದಾರೆ, ಸಾವಂದುರ್ಗಕ್ಕೆ ಹೋಗ್ತೀವಿ—ಅಂತ. ಅವರ ಸಂತೋಷಕ್ಕೆ ಭಂಗ ತರಬೇಡಿ. ನಾಗಮಂಗಲದ ಸ್ಥಾಲಿ ಮೇಲಿನ ನಕಾಸು ಕೆಲಸ ತೋರಿಸಿ ಶೀನಿ ಎದುರಿಗೆ 'ನೋಡು ಸೀನಿ, ಈ ಸ್ಥಾಲಿ ಮೇಲೆ ಹೇಗೆ ನಕಾಸು ಮಾಡಿ ಎಷ್ಟು ಮುದ್ದಾಗಿ ಬಳ್ಳಿ, ಹಣ್ಣು, ಹೂವು, ಇದೆಲ್ಲಾ ಬಿಡಿಸಿದ್ದಾನೆ! ಸೀನು ಮುಂದಕ್ಕೆ ಬರೋ ಹುಡುಗನಪ್ಪ. ಕಲಾಭಿಮಾನ ಈಗಿನಿಂದ ರೂಢಿಸ ಬೇಕು. ಅದಕ್ಕೇ ಮತ್ತೆ ನಿನ್ನ ಇವೊತ್ತು ಸಾವಂದುರ್ಗಕ್ಕೆ ಕರೆದುಕೊಂಡು ಹೋಗೋದು' ಅಂತ ಹೇಳಿದಿರಿ. ಆ ಸ್ಥಾಲಿ ತಿರುಗಿಸಿ ತಿರುಗಿಸಿ ತೋರಿಸಿ ದಿರಿ. ಸಾವಂದುರ್ಗದ ನೋಟಗಳನ್ನೆಲ್ಲಾ ಬಣ್ಣಿಸಿಬಿಟ್ಟಿರಿ."

"ನಿಜ, ನಿಜ. ಅದೆಲ್ಲಾ ಇಲ್ಲವೆಂದೆನೇನು ನಾನು? ಬೆಂಗಳೂರಿ ನಿಂದ ಬಂದ ಮೇಲೆ ಸಾವಂದುರ್ಗಕ್ಕೆ ಹೋಗೋಣ. ಮಾಗಡಿಯಲ್ಲಿದ್ದೂ ಸಾವಂದುರ್ಗ ನೋಡೋದು ಕಷ್ಟವೇ?"

"ಕಷ್ಟವೋ ಸುಖವೋ, ಸಾವಂದುರ್ಗ ಇದುವರೆಗೆ ನೋಡಿಯೇ ಇಲ್ಲವಲ್ಲ. ಶೀನಿ ನೆವದಲ್ಲಾದರೂ ನಮಗೆಲ್ಲಾ ಅದಕ್ಕೆ ಅವಕಾಶ. ಇನ್ನೇನು ನಾನು ಕೇಳಿದ್ದು ಬೇರೆ ಒಂದೂ ನಡೆಯುವ ಹಾಗಿಲ್ಲ. ನಿಮ್ಮ ಮಕ್ಕಳಿಂದ

ಲಾದರೂ, ನಾನು ಸಾವಂದುರ್ಗ ನೋಡಬಹುದು. ಹೂವಿನಿಂದ ನಾರಿಗೂ ಸ್ವರ್ಗ."

"ನೀನು ಕೇಳಿದ್ದು ಯಾವುದು ನಡೆದಿಲ್ಲ?"

"ನಿಮ್ಮ ಮಾತಿಗೆ ಎಷ್ಟು ನಗಬೇಕೋ ಕಾಣೆ! ಮಾತೆತ್ತಿದರೆ ಗುರುಮುಖದಿಂದ ಭರತಶಾಸ್ತ್ರ ಓದಿದ್ದೇನೆ, ಭರತಶಾಸ್ತ್ರ ಭರತಶಾಸ್ತ್ರ ಅಂತ ಬಾಯಿ ಬಾಯಿ ಬಿಡ್ತೀರಿ. ನೀವು ವರ್ಣಿಸೋ ವೈಖರಿ ಕಂಡು ನಾಟ್ಯ ನೋಡಬೇಕೆಂತ ನಂಗೂ ಆಶೆ. ಕುದೂರು ಸೂಳೆಯರನ್ನ ಕರೆಸಿ ನಮ್ಮ ಮನೆಯಲ್ಲಿ ಮೇಳ ಕಟ್ಟಿಸಿ ಅಂದರೆ, ಅದಕ್ಕೆ ಮಾತ್ರ ಒಪ್ಪಲಿಲ್ಲ. ಮಾತೆತ್ತಿದರೆ ಕಲಾಭಿಮಾನ ಅಂದದ್ದೂ ಅಂದದ್ದೆ. ಎಂಥ ಸುಬೇದಾರಿಯೋ ನಿಮ್ದು! ಹೋದ ವರ್ಷವಲ್ಲ ಆಚೇ ವರ್ಷ—ಅಲ್ಲ ಅಲ್ಲ ಅದರ ಆಚೇ ವರ್ಷ ನಮ್ಮ ಮಹಾರಾಜರು ಚಾಮರಾಜ ಒಡೆಯರಿಗೆ ರಾಜ್ಯ ಬಂದು ಪಟ್ಟವಾದ ದಿನ ಊರಲ್ಲೆಲ್ಲಾ ಉತ್ಸವ. ಅವೊತ್ತು ನಮ್ಮ ಮನೇಲಿ ಮೇಳ ಕಟ್ಟಿಸಿದ್ರೆ! ಅದೂ ಬೇಡ. ನಮ್ಮ ಮಗು ಹುಟ್ಟಿದ ಹಬ್ಬದ ದಿನವಾದರೂ ಮೇಳ ಕಟ್ಟಿಸಿದ್ರೆ! ಅದೂ ಬೇಡ. ಈ ಸಲ ಶೀನಿ ಮುಂಜಿ ದಿನವಾದರೂ ಮೇಳ ಕಟ್ಟಿಸಿ ಮತ್ತೆ."

"ನಿನ್ನ ಮಾತು ಕೇಳಿಬಿಟ್ಟರೆ ಕೊಳ್ಳಿ ತೆಗೆದುಕೊಂಡು ತಲೆ ತುರಿಸಿಕೊಂಡ ಹಾಗೆ. ಸೂಳೆಯರ ಮೇಳ ನಮ್ಮಲ್ಲಿ ನಡೆದರೆ, ಸೂಳೆಯರನ್ನ ನಮ್ಮ ಮನೆಗೆ ಕರೆಸಿದರೆ—ಜನ ಆಡಿಕೊಳ್ಳುವುದಿಲ್ಲವೆ?"

"ಅವರು ನಮ್ಮ ಮನೆಗೆ ಬಂದಿಳಿಯಬಹುದೆಂತ ನಾನೇ ಹೇಳಿದ ಮೇಲೆ ನಿಮಗೇನು?"

"ನಮ್ಮ ಚಿಕ್ಕ ಸಾಹೇಬರಿಗೆ ಸೂಳೆಯರ ಮೇಳವೆಂದರೆ ಆಗೋದಿಲ್ಲ; ಅವರು ಬೆಂಕಿ ಬೆಂಕಿಯಾಗುತ್ತಾರೆ. ಅವರು ಕೋಪಿಸಿಕೊಂಡರೆ ಗತಿ? ನೀನು ನಗೋದೇಕೆ? ನಗದೆ ನಿನಗೇನು?"

"ನಗದೆ ಇನ್ನೇನು ಮಾಡಲಿ? ಕಚೇರೀಲಿ ಮೇಳ ಕಟ್ಟಿಸಬೇಕಾದರೆ ಚಿಕ್ಕ ಸಾಹೇಬರ ಭಯ. ನಮ್ಮ ಮನೇಲಿ ಮೇಳ ಕಟ್ಟಿಸಿ ಕಲಾಭಿಮಾನ ತೋರಿಸಿ—ಅಂದರೆ ಅದಕ್ಕೇಕೆ ಭಯ? ನನ್ನ ಮೇಲೆ ಹೇಳಿಬಿಡಿ. 'ನಮ್ಮ

ಮನೆ ಸಾಹೇಬರು ಅಪ್ಪಣೆ ಮಾಡಿದರು' ಅಂದುಬಿಡಿ. ನಿಮ್ಮ ಚಿಕ್ಕ ಸಾಹೇಬರು ಬಾಯಿ ಮುಚ್ಚಿಕೊಂಡು ಸುಮ್ಮನಾಗುತ್ತಾರೆ. ಹೋಗಲಿ ಇವೊತ್ತು ಮೇಳದ ಮಾತು ಬೇಡ. ಇನ್ನೂ ಮುಂಜಿ ದಿನ ದೂರ ಇದೆ. ಸಾವಂದುರ್ಗದ ಮಾತು ಹೇಳಿ. ಅರ್ಥ ತಿಳೀದೆ ಇದ್ರೂ ಹುಡುಗರೆಲ್ಲ 'ಕಲಾಭಿಮಾನ ಸಾವಂದುರ್ಗದಲ್ಲಿ, ಕಲಾಭಿಮಾನ. ಕೆಂಪೇಗೌಡರ ಕೋಟೆ —ನರಸಿಂಹಸ್ವಾಮಿ ಗುಡಿ—ಕಲಾಭಿಮಾನ' ಅಂತ ಒರಲು ಸಂತೆಗೆ ಪ್ರಾರಂಭಿಸಿದ್ದಾರೆ."

"ಆಗಲೇ ಹೇಳಿಬಿಟ್ಟಿದ್ದೇನೆ. ಅದು ಸಾಧ್ಯವಿಲ್ಲ. ಇವೊತ್ತು ಮಧ್ಯಾಹ್ನ ಬೆಂಗಳೂರಿಗೆ ಹೊರಡಬೇಕು. ರಾತ್ರಿ ತಾವರೇಕೆರೆಯಲ್ಲಿ ತಂಗಿದ್ದು ನಾಳೆ ಬೆಳಗ್ಗೆ ಅಲ್ಲಿಂದ ಹೊರಟು ಬೆಂಗಳೂರಿಗೆ ಹೋಗಲೇಬೇಕು."

ಹೋಗಲಿ. ಹಾಗೂ ಆಗಲಿ. ಬೆಂಗಳೂರಿಂದ ಬಂದ ಮಾರನೆಯ ದಿನವೇ ಸಾವಂದುರ್ಗಕ್ಕೆ ಕರೆದುಕೊಂಡು ಹೋಗಬೇಕು. ಮುಂಜಿ ಹದಿನೈದು ದಿನವಿದೆ. ಹೋದ ವರ್ಷ ಸೆಟ್ಟರ ಮನೆ ಮದುವೆಯಲ್ಲಿ ಕೂಡ ಮೇಳ ಕಟ್ಟಿಸಿದರಂತೆ. ನಾನೂ ಊರಿನಲ್ಲಿದ್ದರೆ ಹೋಗಿ ನೋಡುತ್ತಿದ್ದೆ. ಈ ಸಲ ನಮ್ಮ ಮನೆಯಲ್ಲಿ ಮೇಳ ಆಗಲೇಬೇಕು. ನಾವು ಅವರಿಗೇನು ಕಡಮೆ? ನೀವು ತಾಲ್ಲೂಕು ದೊರೆ. ಸುಬೇದಾರರು ಸೆಟ್ಟರಿಗಿಂತ ಕಡೆ ಯಾಗಬೇಕೆ? ಹಣವೇ ಹೆಚ್ಚೆ? ಮೇಳ ಕಟ್ಟಿಸಿ ಹಣ ಕೊಟ್ಟರೆ ನಾವು ಕಳೆದುಕೊಳ್ಳುವುದೇನೋ ಕಾಣೆ. ಅದೂ ಕಲಾಭಿಮಾನವಲ್ಲವೆ?"

* * * *

"ಟೋಪಿಯುವರಾದ" ದೊಡ್ಡ ಸಾಹೇಬರಿಗೆ ವೆಂಕಟರಾಯರಲ್ಲಿ ಪೂರ್ಣಾಭಿಮಾನ. ರಾಯರೇನೊ ಆಗಿನ ಕಾಲದ "ಮಿಡ್ಲ್" ಪರೀಕ್ಷೆಯಲ್ಲಿ ತೇರ್ಗಡೆಹೊಂದಿದ ಮೇಲೆ ಒಂದೇ ಒಂದು ವರ್ಷಕಾಲ ವ್ಯಾಸಂಗಮಾಡಿದ ತರುವಾಯ ಪಾಠಶಾಲೆಯನ್ನು ಬಿಟ್ಟವರು. ಆದರೂ, ಇಂಗ್ಲಿಷ್ ಓದಿದವರು ಹೆಚ್ಚು ಜನರಿಲ್ಲದಿದ್ದ ಆಗಿನ ಕಾಲದಲ್ಲಿ ಅವರೂ ಭಾರಿ ವಿದ್ಯಾವಂತರ ಗುಂಪಿಗೇ ಸೇರಿದವರೆಂಬ ಭಾವನೆಯಿದ್ದಿತು. ವಿದ್ಯೆಯಲ್ಲಿ ಹಿಂದೆ ಬಿದ್ದಿದ್ದವ

ರಾದರೂ ರಾಯರು ಗುಣದಲ್ಲೂ, ಬುದ್ಧಿಸಾಮರ್ಥ್ಯದಲ್ಲೂ, ಕಾರ್ಯದಕ್ಷತೆ ಯಲ್ಲೂ, ಕಲಾಭಿಮಾನದಲ್ಲೂ ಶ್ರೇಷ್ಠವರ್ಗಕ್ಕೆ ಸೇರಿದವರು; ತಾಲ್ಲೂಕ ನ್ನಂತೂ "ಅಂಗೈಯಲ್ಲಿಟ್ಟುಕೊಂಡು" ಅವರು ಅತಿ ಚತುರರಾಗಿ ಆಡಳಿತ ನಡೆಯಿಸುತ್ತಿದ್ದರು. ಈ ಗುಣಗಳ ದೆಸೆಯಿಂದ ಅವರು ದೊಡ್ಡ ಸಾಹೇಬರಿಗೆ ಅಚ್ಚುಮೆಚ್ಚಾಗಿದ್ದರು. ಒಂದು ಸಲ ವೆಂಕಟರಾಯರು ಅವರೊಡನೆ ಕುದುರೆಯ ಮೇಲೆ ಹೋಗುತ್ತಿದ್ದವರು, ಸೊಂಪಾಗಿ ಬೆಳೆದು ನಿಂತಿದ್ದ ಆಲದ ಮರವನ್ನೂ ಹವಳದ ಗುಂಡುಗಳಂತೆ ಅದರಲ್ಲಿ ತುಂಬಿದ್ದ ಹಣ್ಣುಗಳನ್ನೂ, ನೋಡಿ ಬೆರಗಾಗಿ, ತಮ್ಮ ಕುದುರೆಯನ್ನು ಅಲ್ಲಿ ನಿಲ್ಲಿಸಿ ಬಹಳ ಕಾಲ ಅದನ್ನೇ ನೋಡುತ್ತಿದ್ದು, ಅನಂತರ ಕುದುರೆಯನ್ನು ಓಡಿಸಿಕೊಂಡು ಹೋಗಿ ಅವರಲ್ಲಿ (ದೊಡ್ಡ ಸಾಹೇಬರಲ್ಲಿ) ಕ್ಷಮೆಯನ್ನು ಬೇಡಿದರಂತೆ. ಮತ್ತೊಂದು ಸಲ ಒಂದು ದೇವಾಲಯದಲ್ಲಿದ್ದ ಶಿಲಾವಿಗ್ರಹದ ಶಿಲ್ಪಕಲಾ ಕೌಶಲ್ಯವನ್ನು ಮೆಚ್ಚಿ ತಲೆದೂಗಿ ಗಟ್ಟಿಯಾಗಿ ಅತ್ತುದನ್ನು ಸಾಹೇಬರು ನೋಡಿದ್ದರು ಜೋಡೆತ್ತಿನ ಬಂಡಿಯಲ್ಲಿ ಹೋಗುತ್ತಿರುವಾಗ ತಂಗಡಿ ಹೂವನ್ನೋ, ಚಿಗುರಿದ್ದ ಮಾವಿನ ಮರವನ್ನೋ, ಹಕ್ಕಿಗಳ ಗುಂಪನ್ನೋ ಕಂಡಲ್ಲಿ, ಅವರು ಒಡನೆಯೇ ಬಂಡಿಯಿಂದಿಳಿದು ಅವುಗಳನ್ನು ಎಂದೂ ನೋಡಿಲ್ಲದಷ್ಟು ಆನಂದೋತ್ಸಾಹಗಳಿಂದ ಕೂಡಿ ನೋಟದಲ್ಲಿ ನೆಟ್ಟಮನಸ್ಸು ಳ್ಳವರಾಗಿ ಮೈಮರೆಯುತ್ತಿದ್ದರು. ದೊಡ್ಡ ಸಾಹೇಬರು ಈ ಸಂಗತಿಗಳನ್ನೆಲ್ಲ ಬಲ್ಲವರಾದಕಾರಣ, ರಾಯರ ಕಲಾಭಿಮಾನವನ್ನು ಅವರು ಆಗಾಗ ಕೊಂಡಾಡುತ್ತಲೇ ಇದ್ದರು; ಸಾಹೇಬರಿಗೆ ಇತರ ಸುಬೇದಾರರಿಗೆಲ್ಲರಿಗಿಂತ ವೆಂಕಟರಾಯರೇ ಅಚ್ಚುಮೆಚ್ಚು. ಅಂತಹವರಿಗೆ ಸೀಸಿ ಉಪನಯನದ ಲಗ್ನಪತ್ರಿಕೆ ಕಳುಹಿಸಿ ಪತ್ರ ಬರೆದು ಅವರು "ವಿಷಾದಪಡುವಂತೆ ಮಾಡಿ ಬಿಟ್ಟೆನಲ್ಲಾ"—ಎಂಬುದು ರಾಯರ ಚಿಂತೆ. ಸಾಹೇಬರಂತಹ ಕಲಾಭಿ ಮಾನಿಗಳಿಗೆ ವಿಷಾದವನ್ನು ತಂದುಹಾಕಿದ ತಮ್ಮನ್ನು ಹೋಲುವ ಪಾಪಿಯು ಮತ್ತೊಬ್ಬನಿರಲಿಲ್ಲವೆಂಬುದು ಅವರ ವಿಷಮ ಸಂಕಟ. ಸಾಹೇಬರ ವಿಷಾದ ಕ್ಕೇನು ಕಾರಣವಿರಬಹುದೆಂಬುದು ಅವರು ಪರಿಪರಿಯಾಗಿ ಊಹಿಸಿ ಊಹಿಸಿ ಗುಣಿತ ಹಾಕುತ್ತಿದ್ದರು. ಬ್ರಾಹ್ಮಣನು ಕ್ರೈಸ್ತರಿಗೆ ಲಗ್ನಪತ್ರಿಕೆ ಕಳುಹಿಸು

ವುದು ಕ್ರೈಸ್ತರ ದೃಷ್ಟಿಯಲ್ಲಿ ಅಯುಕ್ತವೆ, ಭಾರತೀಯನು ಐರೋಪ್ಯರಿಗೆ ಲಗ್ನಪತ್ರಿಕೆ ಕಳುಹಿಸುವುದು ನಿಷಿದ್ಧವೆ, ಲಗ್ನಪತ್ರಿಕೆಯು ಅರಿಸಿನದಿಂದ ಸಾಹೇಬರ ಬಟ್ಟೆಯೇನಾದರೂ "ಅರಿಸಿನವಾಗಿ" ಅವರು ವಿಷಾದಪಟ್ಟಿರ ಬಹುದೆ, ಕೈಕೆಳಗಿನವನು ತಮಗೆ ಲಗ್ನಪತ್ರಿಕೆ ಕಳುಹಿಸುವಷ್ಟು ಸಾಹಸಕ್ಕೆ ತೊಡಗಿದನೆಂಬುದು ಅವರ ಆಶಯವಿರಬಹುದೆ, ಊಟದ ಕಾಲದಲ್ಲಿ ತಮ್ಮನ್ನು ಸಹಪಙ್ಕ್ತಿಗೆ ಸೇರಿಸದಿದ್ದೂ ಅಣಕವಾಡುವುದಕ್ಕಾಗಿಯೋ ಅಥವಾ ಅವಮಾನ ಮಾಡುವುದಕ್ಕಾಗಿಯೋ ಲಗ್ನಪತ್ರಿಕೆಯನ್ನು ಕಳುಹಿಸಿರಬೇಕೆಂದು ಸಾಹೇಬರು ನಿಷ್ಕರ್ಷಿಸಿ ವಿಷಾದಪಟ್ಟಿರಬಹುದೆ - ಎಂದು ಮುಂತಾಗಿ ವಿಧವಿಧ ವಾದ ಪ್ರಶ್ನೆಗಳನ್ನು ತಮಗೆ ತಾವೇ ಹಾಕಿಕೊಂಡು ವೆಂಕಟರಾಯರು ಆಯಾಸ ಪಡುತ್ತಿದ್ದರು.

* * * *

ವೆಂಕಟರಾಯರು "ದೊಡ್ಡ ಸಾಹೇಬರ" ಮನೆಗೆ ಹೋದಾಗ ಮಧ್ಯಾಹ್ನದ ಮೇಲೆ ಸುಮಾರು ನಾಲ್ಕು ಘಂಟೆಯಾಗಿದ್ದಿತು. ಆ ದಿನ ಭಾನುವಾರ. ಸಾಹೇಬರು ಕುಟುಂಬ ಸಮೇತರಾಗಿ ಲಘ ಉಪಾಹಾರವನ್ನು ಸೇವಿಸುತ್ತಿದ್ದರು. ಸೇವಕನೊಬ್ಬನು ಬಹಳ ಗೌರವದಿಂದ ವೆಂಕಟರಾಯ ರನ್ನು ಬರಮಾಡಿಕೊಂಡು ಆಗಂತುಕರಿಗಾಗಿ ಏರ್ಪಟ್ಟಿದ್ದ ಕೊಟಡಿಯೊಳಗೆ ಕುಳ್ಳಿರಿಸಿದನು. ಆ ಕೊಟಡಿಯ ಅಲಂಕಾರವನ್ನೂ ಅದೊಂದು ಕಲಾಭವನ ವೆಂದು ತೋರುವಂತೆ ಅಲ್ಲಿದ್ದ ನಾನಾ ವಸ್ತುಗಳನ್ನೂ ನೋಡಿ ರಾಯರು ಬೆರಗಾದರು. ರಾಯರನ್ನು ಕಂಡು ಸೇವಕನೂ ಅದೇ ರೀತಿ ಬೆರಗಾದನು. ಒಡಲೆಲ್ಲ ಜರತಾರಿಯ ಎಳೆಗಳಿಂದ ಕೂಡಿದ್ದ ಸೊಗಸಾದ ಎಣ್ಣೆಗೆಂಪು ಬಣ್ಣದ ಗದ್ದೆಮಡಿ ರುಮಾಲು; ರಕ್ತವನ್ನೇ ಚಿಮ್ಮುವಂತೆ ತೋರುವ ಮುದ್ದಾದ ಮುಖಮಂಡಲ; ಆಕಾರಕ್ಕೆ ತಕ್ಕ ಪ್ರಮಾಣದಲ್ಲಿ ಶೋಭಿಸು ತ್ತಿದ್ದ "ಕುಂಬಳದ ಹಣ್ಣಿನಂತಿದ್ದ" ದೇಹ; ಕರಿಯ ರೇಷ್ಮೆಯ ನಿಲುವಂಗಿ; ಕರಿಯ ರೇಷ್ಮೆ ಅಂಚಿನ ಜರತಾರಿಯ ಪಂಚೆ. ಕಾಲುಗಳಿಗೆ ಅಚ್ಚಗೆಂಪು ಬಣ್ಣದ ಅಂದವಾದ ಜೋಡುಗಳು; ಕೈಬೆರಳಿನಲ್ಲಿ ವಜ್ರದುಂಗುರ; ಇವು

ಗಳಿಂದ ಕೂಡಿ ಇವುಗಳಿಗೇ ಅಲಂಕಾರಪ್ರಾಯರಾಗಿ ಭಾರತೀಯ ಸಂಸ್ಕೃತಿಯ ಮೂರ್ತಿಯಂತಿದ್ದ ರಾಯರನ್ನು ನೋಡಿ ಆ ಸೇವಕನು ಬೆರಗಾದುದೇನೂ ಆಶ್ಚರ್ಯವಲ್ಲ. ರಾಯರು ಕುಳಿತಿದ್ದ ಕೊಟಡಿಯಲ್ಲಿ ತಾಜಮಹಲಿನ (ಅಮೃತ ಶಿಲೆಯ) ಚಿಕ್ಕ ಮಾದರಿಯೊಂದನ್ನು ಕಂಡು ಆಶ್ಚರ್ಯಚಕಿತರಾದರು. ಅದರ ಅಂದಚಂದಗಳನ್ನು ನೋಡಿ, ತಮ್ಮ ಬಾಲ್ಯದಲ್ಲಿ "ಮಿಡ್ಲ್" ಪರೀಕ್ಷೆಗೆ ಓದುತ್ತಿದ್ದಾಗ ತಾವು ವ್ಯಾಸಂಗ ಮಾಡಿದ ಗ್ರಂಥದಲ್ಲಿದ್ದ ತಾಜ್‌ಮಹಲಿನ ವರ್ಣನೆಯು ಅವರ ನೆನಪಿಗೆ ಬಂದಿತು. ಅವರು "ಆ ತಾಜ್‌ಮಹಲ್ ಹೀಗಿದೆಯೆ? ಚಿಕ್ಕದೇ ಹೀಗಿರುವಲ್ಲಿ ಆಗ್ರಾ ದಲ್ಲಿರುವ ತಾಜ್‌ಮಹಲ್ ಇನ್ನೆಷ್ಟು ಚೆನ್ನಾಗಿರಬೇಕು? ಎಂಥಾ ಪ್ರೇಮ! ಎಂಥಾ ಕಾಣಿಕೆ! ಎಂಥಾ ಕಟ್ಟಡ" ಎಂದು ಮುಂತಾಗಿ ತಮ್ಮ ಮನಸ್ಸಿ ನಲ್ಲಿ ಹೇಳಿಕೊಳ್ಳುತ್ತ ಕಣ್ಣೀರು ಸುರಿಸಲುಪಕ್ರಮಿಸಿದರು. ಅದರ ವಿಚಾರ ವನ್ನು ಯೋಚಿಸಿ ಕಣ್ಣೀರು ಸುರಿಸುತ್ತಿದ್ದರೆ ಸಾಹೇಬರು ಕಂಡಾರೆಂದು ಕೊಂಡು, ಸಮೀಪದಲ್ಲಿದ್ದ ಐರೋಪ್ಯ ನರ್ತಕಿಯೊಬ್ಬಳ ಭಾವಚಿತ್ರವನ್ನು ನೋಡುತ್ತ ಕುಳಿತರು. ರಾಯರು ಕಣ್ಣೀರನ್ನು ಸುರಿಸಿದುದನ್ನು (ಮರೆಯಾಗಿ ನಿಂತು ನೋಡುತ್ತಿದ್ದ) ರಾಚನೆಂಬ ಸೇವಕನು ಕಂಡು ಅಚ್ಚರಿಗೊಂಡು ದೊಡ್ಡ ಸಾಹೇಬರಿಗೆ ತಿಳಿಸಿದನು. "ಆತನದು ಕಲಾಭಿಮಾನದಿಂದ ತುಂಬಿದ ಮನಸ್ಸು" ಎಂದು ಅವರು ತಮ್ಮ ಕುಟುಂಬದವರಿಗೆ ತಿಳಿಸಿ ರಾಯರನ್ನು ನೋಡಲು ಕೊಟಡಿಗೆ ಬಂದರು.

ವೆಂಕಟರಾಯರು ಐರೋಪ್ಯ ನರ್ತಕಿಯ ಭಾವಚಿತ್ರವನ್ನು ನೋಡು ತ್ತಿದ್ದುದನ್ನು ಕಂಡು, ವಂದನಾಪೂರ್ವಕವಾಗಿ ಕುಶಲಪ್ರಶ್ನೆಗಳಾದ ತರು ವಾಯ "ನಿಮಗೆ ನರ್ತನದಲ್ಲಿ ಆಸಕ್ತಿಯುಂಟೆ?" ಎಂದು ಇಂಗ್ಲಿಷಿನಲ್ಲಿ ಕೇಳಿದರು. ರಾಯರ ಇಂಗ್ಲಿಷು ಎಳೆಯ ಇಂಗ್ಲಿಷು; ಅದು ಬಲಿಯಲು ಅವಕಾಶವಿರಲಿಲ್ಲ. ಆದರೂ ಬಹು ಕಷ್ಟಪಟ್ಟು ಅವರು ಇಂಗ್ಲಿಷಿನಲ್ಲಿ ಮಾತ ನಾಡುತ್ತಿದ್ದರು. ಅವರು ಆಸಕ್ತಿಯುಂಟೆಂದರೆ ಹೇಗೋ ಇಲ್ಲವೆಂದರೆ ಏನು ಪ್ರಮಾದವೋ ಎಂದುಕೊಂಡು ಇಂಗ್ಲಿಷಿನಲ್ಲಿ "ಉಂಟು....ಅಷ್ಟೇನೂ ಇಲ್ಲ" ಎಂದರು. ಸಾಹೇಬರು ನಕ್ಕು "ನೀವು ಹೀಗೇಕೆ ಅನುಮಾನಿಸುತ್ತೀರಿ?

ಆಕೆಯ ನರ್ತನ ಕೌಶಲವನ್ನು ಕಂಡು ಯೂರೋಪಿಯನರಾದ ನಾವೆಲ್ಲರೂ ಮುಗ್ಧರಾಗಿದ್ದೇವೆ. ಯೂರೋಪಿನಲ್ಲಿ ಆಕೆಯ ಜನಾಂಗದವರಂತೂ ಹೆಮ್ಮೆ ಪಡುತ್ತಿದ್ದಾರೆ. ಈ ಚಿತ್ರಪಟ ಸಿಕ್ಕುವುದು ಬಹು ಕಷ್ಟ. ಅದು ಸಿಕ್ಕಿದುದು ನನ್ನ ಸುಯೋಗ'' ಎಂದು (ಇಂಗ್ಲಿಷಿನಲ್ಲಿ) ಹೇಳಿ ''ನಿಮ್ಮಲ್ಲಿಯೂ ನರ್ತಕಿಯರಿದ್ದಾರಲ್ಲವೆ? ನಾಟ್ಯವನ್ನು ನೋಡಿದ್ದೀರಾ? ಕಲಾಭಿಮಾನಿಗಳಾದ ನೀವು ನೋಡಿರಬೇಕಲ್ಲವೆ?'' ಎಂದು ಕೇಳಿದರು.

ರಾಯರು ''ನಾನು ಕಲಾಭಿಮಾನಿಯಲ್ಲ ತಾವೀಗ ಕಲಾಭಿಮಾನಿಗಳು. ಇಲ್ಲಿರುವ ತಾಜ್‌ಮುಹಲ್ ಕಟ್ಟಡದ ಮಾದರಿಯೇ ಅದಕ್ಕೆ ಸಾಕ್ಷಿ. ನಾನು ನಮ್ಮ ದೇಶದ ನಾಟ್ಯವನ್ನು ನೋಡಿದ್ದೇನೆ. ನಮ್ಮ ತಾಲ್ಲೂಕಿನಲ್ಲಿ ಒಳ್ಳೆಯ ನರ್ತಕಿಯರಿದ್ದಾರೆ. ನಮ್ಮವರ ನಾಟ್ಯವನ್ನು ತಾವು ನೋಡಿದ್ದೀರಾ?'' ಎಂದರು.

ಸಾಹೇಬರು ನಕ್ಕು, ''ಇಲ್ಲ, ನಾನು ನೋಡಿಲ್ಲ. ಅದಕ್ಕೆ ಇದುವರೆಗೂ ಅವಕಾಶವೊದಗಲಿಲ್ಲ'' ಎಂದರು.

ರಾಯರು ಬುದ್ಧಿಯನ್ನು ಓಡಿಸಿದರು. ಹೇಗೂ ನಾಗಮ್ಮನವರು ಮೇಳವಾಗಬೇಕೆಂದು ಬಯಸಿ, ವೇಶ್ಯೆಯರನ್ನು ಮನೆಯಲ್ಲಿ ಇಳಿಸಿ ಉಪಚರಿಸಲು ಸಿದ್ಧವಾಗಿದ್ದರು. ನಾಟ್ಯವನ್ನು ನೋಡಲು ಸಾಹೇಬರನ್ನು ಕರೆದರೆ ಅವರೂ ಬರುವಂತೆ ತೋರಿತು. ದೊಡ್ಡ ಸಾಹೇಬರೇ ನಾಟ್ಯವನ್ನು ನೋಡಲು ಬಂದಮೇಲೆ ಚಿಕ್ಕ ಸಾಹೇಬರು ಏನನ್ನೂ ಮಾಡಲಾರರು. ಆದಕಾರಣ, ತಮ್ಮ ಮನೆಯಲ್ಲಿ ನಾಟ್ಯಕ್ಕೆ ಏರ್ಪಾಡು ಮಾಡುವುದೇ ಸರಿಯೆಂದು ರಾಯರ ಮನಸ್ಸಿಗೆ ನಿಷ್ಕರ್ಷೆಯಾಯಿತು. ಆ ಬಳಿಕ ಅವರೀರ್ವರಿಗೂ ಇಂಗ್ಲಿಷಿನಲ್ಲಿ ನಡೆದ ಸಂಭಾಷಣೆಯಲ್ಲಿ ರಾಯರು ಆಡಿದ ಮಾತುಗಳಲ್ಲಿ ಅಶುದ್ಧ ಪ್ರಯೋಗಗಳಿದ್ದುವು. ಇಲ್ಲಿ ಕನ್ನಡ ಭಾಷೆಯಲ್ಲಿ ಅವರ ಸಂಭಾಷಣೆಯ ಸಾರಾಂಶವನ್ನು ಕೊಡುತ್ತಿರುವುದರಿಂದ ಆ ವಿಚಾರವೇ ನಮಗೆ ಅಪ್ರಕೃತ. ರಾಯರು ಉತ್ಸಾಹದಿಂದ ನಮ್ಮ ಊರಿನಲ್ಲಿ ನಾಟ್ಯಕ್ಕೆ ಏರ್ಪಾಟು ಮಾಡಿದರೆ ತಾವು ಕೃಪೆಮಾಡಿ ಈ ಸೇವಕನ ಕುಟೀರಕ್ಕೆ ದಯೆಮಾಡುವಿರಾ?'' ಎಂದರು.

"ಸಂತೋಷವಾಗಿ, ಸಂತೋಷವಾಗಿ, ಅದಿರಲಿ. ನೀವು ಇಲ್ಲಿಗೆ ಬಂದ ಸುದ್ದಿಯೇನೆಂಬುದನ್ನೇ ನಾನು ಕೇಳಲಿಲ್ಲ. ಇಲ್ಲಿ ಎಷ್ಟು ದಿನಗಳು ಇರುತ್ತೀರಿ ?"

"ಇವೊತ್ತು ರಜ. ತಮ್ಮನ್ನು ಕಾಣಲು ಬಂದೆ. ರಾತ್ರಿಯೇ ಹೊರಟು ಬಿಡುತ್ತೇನೆ. ತಮ್ಮನ್ನೇ ನೋಡಲು ಬಂದೆ."

"ಏತಕ್ಕಾಗಿ ?"

"ಇದೋ ತಾವು ಬರೆದ ಕಾಗದ. ಉಪನಯನಕ್ಕೆ ಬರಲಾಗುವುದಿಲ್ಲ ವೆಂದು ತಾವು ವಿಷಾದಿಸುವುದಾಗಿ ಬರೆದಿದ್ದೀರಿ. ತಾವು ಕಲಾಭಿಮಾನಿಗಳು ; ದೊಡ್ಡವರು ; ನನ್ನ ಹಿತಚಿಂತಕರು ಹೀಗಿದ್ದೂ ತಾವು ವಿಷಾದಿಸುವ ಹಾಗೆ ಮಾಡಿದೆನಲ್ಲಾ—ಎಂದು ಸಂಕಟಪಡುತ್ತಿದ್ದೇನೆ. ತಾವು ನನ್ನನ್ನು ಕ್ಷಮಿಸಬೇಕು. ಉಪನಯನಕ್ಕೆ ಬರಬೇಕು. ನಾಟ್ಯದ ಏರ್ಪಾಡನ್ನೂ ಮಾಡುತ್ತೇನೆ. ತಮ್ಮ ಬೀಡಾರಕ್ಕೇ ನಾನು ಊಟ ಕಳುಹಿಸುತ್ತೇನೆ. ತಾವು ವಿಷಾದಪಡುವಂತೆ ಮಾಡಿದೆನಲ್ಲಾ—ಎಂದು ನನಗೆ ಮನೋವ್ಯಥೆ."

ಸಾಹೇಬರು ಈ ಮಾತುಗಳನ್ನು ಕೇಳಿ ನಕ್ಕರು. ಆ ಬಳಿಕ "ಹೀಗೆ ಬರೆಯುವುದು ಇಂಗ್ಲಿಷಿನಲ್ಲಿ ಭಾಷಾ ಮರ್ಯಾದೆ. ಅದೊಂದು ಸಂಪ್ರದಾಯ. ಅಷ್ಟೇ ಹೊರತು ನಾನು ವಿಷಾದಪಡುವಂತೆ ನೀವೇನೂ ಮಾಡಿಲ್ಲ. ನಿಮ್ಮ ಆಹ್ವಾನಕ್ಕಾಗಿ ನಾನು ಕೃತಜ್ಞನಾಗಿದ್ದೇನೆ. ನಾನು ನಿಮ್ಮ ಸದ್ಗುಣಗಳನ್ನು ಬಹಳ ಮೆಚ್ಚಿಕೊಂಡಿದ್ದೇನೆ. ನೀವು ಇಷ್ಟು ಪ್ರೀತಿಯಿಂದ ಇಲ್ಲಿಯವರೆಗೆ ಬಂದು ಕರೆದಿದ್ದೀರಿ. ನಾನು ಎರಡು ದಿನ ರಜ ತೆಗೆದುಕೊಂಡು ನನ್ನ ಪತ್ನಿಯೊಡನೆ ಅವಶ್ಯವಾಗಿ ಬರುತ್ತೇನೆ. ನಾಟ್ಯವನ್ನು ಆನಂದದಿಂದ ನೋಡುತ್ತೇನೆ. ಅದರಲ್ಲಿ ನನಗೆ ಬಹಳ ಆಸಕ್ತಿಯುಂಟು. ಸಾವಂದುರ್ಗದಲ್ಲಿ ಭಾರಿ ಹುಲಿ ಬೇಟೆಗೂ ಅವಕಾಶವಿದೆ" ಎಂದರು.

ವೆಂಕಟರಾಯರು ಮೈಯೆಲ್ಲ ಕಿವಿಯಾಗಿದ್ದಂತೆ ಆ ಮಾತುಗಳನ್ನು ಕೇಳಿ ಆನಂದಿಸಿ "ತಮ್ಮಿಬ್ಬರಿಗೂ ನಾನು ತುಂಬಾ ಕೃತಜ್ಞ. ತಮ್ಮ ಕಲಾಭಿಮಾನವನ್ನಂತೂ ಎಷ್ಟು ಕೊಂಡಾಡಿದರೂ ಸಾಲದು! ನಾನು

ಎಷ್ಟು ಸಂತೋಷದಿಂದ ಊರಿಗೆ ಹೋಗುವೆನೆಂಬುದನ್ನು ಆ ಪರಮಾತ್ಮನೇ ಬಲ್ಲ'' ಎಂದರು.

ಆ ಬಳಿಕ ಸಾಹೇಬರು ಅವರನ್ನು ಆದರದಿಂದ ಬೀಳ್ಕೊಟ್ಟು ''ಎಷ್ಟು ಸೊಗಸಾಗಿ ಬಟ್ಟೆ ಹಾಕಿಕೊಂಡಿದ್ದೀರಿ!'' ಎಂದರು.

*　　　*　　　*　　　*

ರಾಯರ ಮನೋಧರ್ಮವನ್ನರಿಯದೆ ಅವರನ್ನು ಕಟುವಾಗಿ ಕುಹಕ ಮಾಡುವವರಾರಾದರೂ ಆ ದಿನದ ಅವರ ಸಂತೋಷವನ್ನು ನೋಡಿದ್ದರೆ ''ಆತನಿಗೂ ಸ್ವರ್ಗಕ್ಕೂ ಈಗ ಉಳಿದಿರುವುದು ಒಂದೇ ಗೇಣಿನ ಅಂತರ'' ಎಂದು ಹೇಳಿಬಿಡುತ್ತಿದ್ದರು. ಆ ದಿನ ಹಕ್ಕಿಯ ಗರಿಗಿಂತಲೂ ತಮ್ಮ ಮೈ ಹಗುರವಾಗಿದ್ದಂತೆ ರಾಯರಿಗೆ ತೋರಿತು. ರಾಚನಿಗೂ ಅವನ ಜೊತೆಯವನಿಗೂ ಯಥೇಷ್ಟವಾಗಿ ''ಬಕ್ಷೀಸು'' ದೊರೆತುದನ್ನಂತೂ ಹೇಳಬೇಕಾದುದೇ ಇಲ್ಲ. ರಾಯರಿಗೆ ''ಕಲಿಯುಗದ ಕರ್ಣ''ನೆಂದು ಅವರ ಕೈಕೆಳಗಿನವರು ನಿಷ್ಕಲ್ಮಷ ಹೃದಯದಿಂದ ಬಿರುದು ಕೊಟ್ಟಿದ್ದರು. ಅವರ ಮನೆಯ ಅನ್ನದ ತಪ್ಪಲೆ, ಚಿಕ್ಕ ಸಂಸಾರದವರ ಮನೆಯ ಹಂಡೆಯಾಗಬಹುದಾಗಿದ್ದಿತು. ಅಂತಹವರಿಗೆ ಸಂತೋಷವಾದ ಮೇಲೆ ಕೇಳಬೇಕಾದುದೇನು? ಅದೂ ಕತ್ತಲೆಯಲ್ಲಿದ್ದು ಬೆಳಕನ್ನು ಕಂಡಂತೆ ವ್ಯಥೆಪಟ್ಟು ಸಾಕಾಗಿ ಸಂತೋಷವನ್ನು ಕಂಡಮೇಲೆ!

ಅಂದು ರಾತ್ರಿ ಮಾಗಡಿಗೆ ಪ್ರಯಾಣ ಹೊರಟಾಗ ರಾಯರ ಹೃದಯವು ಅವರ ಮನಸ್ಸಿಗೆ ಮಾವಿನ ತನಿ ರಸವನ್ನು ಮನವಾರೆ ಕುಡಿದ ಕೋಗಿಲೆಯಾಯಿತು. "ಕುಹೂ ಕುಹೂ" ಎಂದು ಕೂಗುವಂತೆ ತೋರುತ್ತ, ತನ್ನದೇ ಆದೊಂದು ರೀತಿಯಲ್ಲಿ ಅದು ಪ್ರಶ್ನೆಗಳನ್ನು ಕೇಳತೊಡಗಿತು: "ನಮ್ಮದು ನಿಜವಾದ ಕಲಾಭಿಮಾನವೆ? ನಮ್ಮ ದೇಶದ ಕಲೆಯಲ್ಲಿ ಅನ್ಯ ದೇಶೀಯರಾದ ದೊಡ್ಡ ಸಾಹೇಬರಿಗೆಷ್ಟು ಅಭಿಮಾನ? ಆದರೆ ಅನ್ಯ ದೇಶೀಯರೆಲ್ಲರೂ ಇವರಂತಿದ್ದಾರೆಯೆ? ಅವರ ನರ್ತಕಿಯರ ನಾಟ್ಯ ಕೌಶಲ್ಯದಲ್ಲಿ ಅವರಿಗೆಷ್ಟು ಹೆಮ್ಮೆ? ನಮ್ಮ ಚಿಕ್ಕ ಸಾಹೇಬರಿಗೇಕೆ ನಮ್ಮ

ದೇಶದ ನಾಟ್ಯದಲ್ಲಾದಲಿ, ಸಂಗೀತದಲ್ಲಾಗಲಿ ಆಸಕ್ತಿಯಿಲ್ಲ? ಹಣವನ್ನು ಗಳಿಸುವುದರಲ್ಲಿ ಹೆಚ್ಚಳವಿದ್ದವರಿಗೆಲ್ಲ ಕಲಾಭಿಮಾನದಲ್ಲಿ ಹಿರಿಮೆಯುಂಟೆಂದು ಭಾವಿಸುವುದು ಮೌಢ್ಯವಲ್ಲವೆ?" ಎಂಬಿವು ಅವರ ಹೃದಯವು ಕೇಳಿದ ಪ್ರಶ್ನೆಗಳಲ್ಲಿ ಕೆಲವು.

*     *     *     *

ವೆಂಕಟರಾಯರ ಮನೆಯಲ್ಲಿ ವೇಶ್ಯೆಯ ನಾಟ್ಯವಾದ ದಿನ ಅವರ ಸಂತೋಷವು ಹೆಚ್ಚೋ, ನಾಗಮ್ಮನವರ ಸಂತೋಷವು ಹೆಚ್ಚೋ ಸಭೆಯನ್ನಲಂಕರಿಸಿದ್ದ ದೊಡ್ಡ ಸಾಹೇಬರ, ಅವರ ಪತ್ನಿಯ ಅಥವಾ ಇತರರ ಸಂತೋಷವು ಹೆಚ್ಚೋ ಅಥವಾ ನರ್ತಕಿಯ ಸಂತೋಷವು ಹೆಚ್ಚೋ ಹೇಳತೀರದು. ತಾನು ಆಶೆಯಿಂದ ಬಾಚಿಸಿ ಗಂಟುಹಾಕಿಸಿಕೊಳ್ಳುತ್ತಿದ್ದ ಜುಟ್ಟನ್ನೆಲ್ಲಾ ಮುಂಜಿಯ ಕಾಲದ ಕ್ಷೌರದಿಂದ ಕಳೆದುಕೊಂಡು ಬೋಳುತಲೆ ಮಾಡಿಕೊಳ್ಳಲು ತಾನೇಕೆ ಸಾಮುಕರ ವಂಶದಲ್ಲಿ ಹುಟ್ಟಿದೆನೆಂದು ಹಳಿದುಕೊಳ್ಳುತ್ತ ವ್ಯಥೆಪಡುತ್ತಿದ್ದ ಶೀನಿಯೊಬ್ಬನ ಹೊರತು ಉಳಿದವರೆಲ್ಲರೂ ಹರ್ಷಿಸುತ್ತಿದ್ದರು. ನಾಟ್ಯದ ಕೊನೆಗೆ, ಬೇಡರ ಕಣ್ಣಪ್ಪನ ಕಥೆಯ ಶ್ಲೋಕವನ್ನು ಹೇಳಿಕೊಂಡು ನರ್ತಕಿಯು ಅಭಿನಯ ಹಿಡಿಯಲುಪಕ್ರಮಿಸಿದಳು. ಅದಕ್ಕೆ ಮುಂಚಿತವಾಗಿ ರಾಯರು ದೊಡ್ಡ ಸಾಹೇಬರಿಗೂ ಅವರ ಪತ್ನಿಗೂ ಇಂಗ್ಲಿಷ್ ಭಾಷೆಯಲ್ಲಿ ಕಥೆಯನ್ನೆಲ್ಲ ವಿವರಿಸಿ ಹೇಳಿದರು. ಪರಭಾಷೆಯಲ್ಲಿ ರಾಯರಿಗಿದ್ದ ವಾಗ್ವೈಖರಿಯನ್ನು ಕಂಡು ಇಂಗ್ಲಿಷ್ ಭಾಷೆಯನ್ನರಿಯದವರಿಗೆಷ್ಟು ವಿಸ್ಮಯವಾಯಿತೋ ಅಷ್ಟೇಮಟ್ಟಿಗೆ ಅವರ ಮಾತುಗಳಲ್ಲಿದ್ದ ತಪ್ಪುಗಳನ್ನು ಕಂಡು ದೊಡ್ಡ ಸಾಹೇಬರಿಗೂ ವಿನೋದವಾಯಿತು.

ನರ್ತಕಿಯು ಕಣ್ಣಪ್ಪನ ಕಥೆಯ ನಾನಾ ಭಾಗಗಳನ್ನೂ ಬಹು ಸೊಗಸಾಗಿ—ಶ್ಲೋಕವು ಸುತರಾಂ ಅರ್ಥವಾಗದ ದೊಡ್ಡ ಸಾಹೇಬರಿಗೆ ಕೂಡ ಹೃದಯಂಗಮವೆನಿಸಿ ಹರ್ಷದಾಯಕವಾಗುವಂತೆ — ಅಭಿನಯಿಸಿದಳು. ಕಣ್ಣಪ್ಪನ ಬೇಟೆಯ ರಭಸ, ಅವನ ಭಕ್ತಿ, ಅವನ ಅಭಿಷೇಕ, ಅವನು ತಲೆಯಲ್ಲಿ ಮುಡಿದು ತಂದ ಹೂಗಳನ್ನು ಶಿವನಿಗೆ ಸಮರ್ಪಿಸಿದುದು,

ಷ್ಟುಂತಾದ ಅಂಶಗಳನ್ನು ನರ್ತಕಿಯು ಅಭಿನಯಿಸಿದಾಗ ಸಭಿಕರು ಚಿತ್ರದ ಬೊಂಬೆಗಳಾದರು. ಕಣ್ಣಪ್ಪನು ತನ್ನ ಎರಡನೆಯ ಕಣ್ಣನ್ನು ಕಿತ್ತುಮೇಲೆ ಶಿವನಿಗರ್ಪಿಸುವಾಗ ದೃಷ್ಟಿವಿಹೀನನಾಗಿ ತತ್ತರಿಸಿದ ಬಗೆಯನ್ನು ನರ್ತಕಿಯು ಅಭಿನಯ ಮಾಡಿ ಹಾಡಿದಾಗಲಂತೂ ಹಲವರ ಕಣ್ಣುಗಳಲ್ಲಿ ನೀರು ತುಂಬಿ ತುಳುಕಾಡಿತು. ನರ್ತನವು ಮುಗಿದೊಡನೆಯೇ ಆಕೆಯು ನೆಲದ ಮೇಲೆ ಹೆಜ್ಜೆಗಳನ್ನಿಡದೆ ಮಂಡಿಯನ್ನು ನೆಲಕ್ಕೂರಿ ಹಿಂದೆ ಸರಿದು ಹೋಗಿ ಸಭಿಕರಿಗೆ ಕೈ ಮುಗಿದು ಕುಳಿತುಕೊಂಡಳು. ಆಕೆಯು ಕುಳಿತಿದ್ದ ಕಡೆಯಿಂದಲೇ ಜನರು ಬಾಗಿಲಿನಿಂದ ಆಚೆಗೆ ಹೋಗಬೇಕಾಗಿದ್ದಿತು.

"ದೊಡ್ಡ ಸಾಹೇಬರು" ವೆಂಕಟರಾಯರಿಗೆ ತಮ್ಮ ವಂದನೆಗಳನ್ನೂ ತಮ್ಮ ಪತ್ನಿಯ ವಂದನೆಗಳನ್ನೂ ಅರ್ಪಿಸಿ ಹೊರಟರು. ನರ್ತಕಿಯೂ ಹಿಮ್ಮೇಳದವರೂ ಕುಳಿತಿದ್ದ ಕಡೆಗೆ ಅವರು ಹೋದರು. ನಾಟ್ಯವು ಬಹು ಚೆನ್ನಾಗಿದ್ದಿತೆಂದು ತಿಳಿಸಬೇಕೆಂಬುದು ಅವರ ಆಶಯವಾಗಿದ್ದಿತು. ನರ್ತಕಿ ರಭಸದಿಂದ ದೊಡ್ಡ ಸಾಹೇಬರ ಮಂಡಿಯನ್ನು ಬಡಿದು ಅವರು ಮುಂದೆ ಬಾರದಂತೆ ತಡೆದಳು. ಅವಳು ಆಗ ನೆಲಕ್ಕೆ ಹಾಸಿದ್ದ ರತ್ನಕಂಬಳಿಯ ಮೇಲೆ ಮಂಡಿಯನ್ನೂರಿಕೊಂಡು ಮುಂದೆ ಬಂದು ಆ ರೀತಿ ಮಾಡಿದಳು. ಅಲ್ಲದೆ ಓರೆಯಾಗಿ ಬೇರೆ ಕಡೆ ಹೋಗಬೇಕೆಂದು ಸಂಜ್ಞೆ ಮಾಡಿದಳು. ಅವಳು ಮಂಡಿಯನ್ನು ಬಡಿದ ರಭಸವಲ್ಲಿ, ಸಾಹೇಬರು ತಮ್ಮ ಹಿಂದೆ ಬರುತ್ತಿದ್ದ ತಮ್ಮ ಹೆಂಡತಿಯು ಹಿಡಿದುಕೊಳ್ಳದೆ ಹೋಗಿದ್ದರೆ ಕೆಳಕ್ಕೆ ಬಿದ್ದು ಬಿಡುತ್ತಿದ್ದರು. ನರ್ತಕಿಯ ವರ್ತನೆಯನ್ನು ಕಂಡು ಅವಳ ಅವಿನಯ ದಿಂದ ಅವರಿಗೆ ಅಸಮಾಧಾನವಾಯಿತೆಂದೇ ಹೇಳಬೇಕು. ಅವರ ಹೆಂಡತಿ ಗಂತೂ ಬಹಳ ರೋಷ ಬಂದಿತು. ದಂಪತಿಗಳಿಬ್ಬರೂ ದಡದಡನೆ ತಮ್ಮ ಬೀಡಾರಕ್ಕೆ ಹೊರಟುಹೋದರು. ಅವರನ್ನು ಕಳುಹಿಸಿ ಅವರಲ್ಲಿ ಕ್ಷಮಾಪಣೆ ಬೇಡಿ ಹಿಂದಕ್ಕೆ ಬಂದಮೇಲೆ ವೆಂಕಟರಾಯರು ಸಾಹೇಬರಿಗೆ ಅಸಮಾಧಾನ ವಾಗಿದ್ದ ಅಂಶವನ್ನು ಸೂಚಿಸಿ ನರ್ತಕಿಯ ವಿಲಕ್ಷಣ ವರ್ತನೆಗೆ ಕಾರಣವನ್ನು ಕೇಳಿದರು. ಆಕೆಯು "ಈಗ ಅದರ ಮಾತು ಬೇಡ. ಬೆಳಗ್ಗೆ ತಾವೂ ನಾನೂ ಅವರ ಬಳಿಗೆ ಹೋಗೋಣ. ಅಲ್ಲೇ ಹೇಳುತ್ತೇನೆ. ಅವರ

ಕ್ಷಮೆಯನ್ನು ಬೇಡುತ್ತೇನೆ'' ಎಂದಳು. ವೆಂಕಟರಾಯರಿಗೆ ಬಹಳ ಆತಂಕ. ಅಂದಿನ ರಾತ್ರಿಯನ್ನು ಕಳೆಯುವುದು ಅವರಿಗೊಂದು ಯುಗ ವಾಯಿತು. ನಾಗಮ್ಮನವರು ಹೇಳಿದ ಸಮಾಧಾನದಿಂದಲೂ ಏನೂ ಫಲ ವಾಗಲಿಲ್ಲ.

ಬೆಳಗಾದ ಮೇಲೆ ರಾಯರು ನರ್ತಕಿಯನ್ನು ಕರೆದುಕೊಂಡು ಸಾಹೇಬರ ಬೀಡಾರಕ್ಕೆ ಹೋದರು. ಸಂಪ್ರದಾಯದ ಮೇರೆಗೆ ಸಾಹೇಬ ರೊಡನೆ ಕೆಲವು ಮಾತುಗಳನ್ನಾಡಿದ ಮೇಲೆ, ನರ್ತಕಿಯು ತನ್ನ ಅವಿನಯದ ಕಾರಣವನ್ನು ಹಿಂದಿನ ದಿನ ತಿಳಿಸದೆ ಹೋದುದೇ ಮುಂತಾದ ಅಂಶಗಳನ್ನು ಅರಿಕೆಮಾಡಿ ಅದನ್ನು ಅವರ ಸಮಕ್ಷಮದಲ್ಲಿಯೇ ಬಿನ್ನೈಸಲು ಆಕೆಯು ಬಂದಿದ್ದುದನ್ನು ರಾಯರು ಅವರಿಗೆ ಶ್ರುತಪಡಿಸಿದರು.

ನರ್ತಕಿಯು ಲಜ್ಜೆಯಿಂದ ತಲೆಬಾಗಿ ''ನಾನು ಚಿಕ್ಕವಳು. ನಾನು ಮಾಡಿದ ಅಪರಾಧವನ್ನು ಕ್ಷಮಿಸಬೇಕು. ಆದರೆ ಆಗ ನಾನು ಈ ಪ್ರಪಂಚ ದಲ್ಲಿರಲಿಲ್ಲ. ಕಣ್ಣಪ್ಪನು ಶಿವನನ್ನು ಪೂಜಿಸಿದಂತೆ ನಾನು ಅಭಿನಯಿಸಿ ಶಿವಲಿಂಗವಿದ್ದಂತೆ ಭಾವಿಸಿಕೊಂಡ ಸ್ಥಳ, ನನಗೆ ಪರಮ ಪವಿತ್ರ. ಅದ ಕ್ಕಾಗಿಯೇ ನಾನು ಕೂಡ ಅಲ್ಲಿ ಹೆಜ್ಜೆಯಿಡದೆ ಮೇಳ ಮುಗಿದ ಮೇಲೆ ಮಂಡಿಯನ್ನು ನೆಲಕ್ಕೂರಿ ಹಿಂದಕ್ಕೆ ಸರಿದೆ. ತಾವು ಆ ಪವಿತ್ರ ಸ್ಥಳವನ್ನು ತುಳಿಯುವುದನ್ನು ಸೈರಿಸಲಾರದೆ ನಾನು ಹಾಗೆ ಮಾಡಿದೆ. ಬೇಡರ ಕಣ್ಣಪ್ಪ ತನ್ನ ತಲೆಗೆ ಸೆಕ್ಕಿಸಿ ತಂದ ಕಾಡುಹೂಗಳನ್ನು ಶಿವಾರ್ಪಣ ಮಾಡಿದ. ಅದನ್ನು ಸೂಚಿಸಿ ನನ್ನ ತಲೆಯ ಹೂಗಳನ್ನೇ, ನನ್ನೆದುರಿಗೆ ನಿಂತಿದ್ದಂತೆ ನಾನು ಭಾವಿಸಿಕೊಂಡಿದ್ದ ಶಿವನಿಗೆ ಸಮರ್ಪಿಸಿದೆ. ಆಗ ಕೆಳಗೆ ಬಿದ್ದ ಹೂಗಳನ್ನು ಆರಿಸಿಕೊಂಡು ಸೆರಗಿನಲ್ಲಿ ಕಟ್ಟಿಕೊಂಡಿದ್ದೇನೆ. ಅವು ನಾನೇ ಮುಡಿದಿದ್ದ ಹೂಗಳಾದರೂ ಈಗ ಅವು ನನಗೆ ಪರಶಿವನ ಪ್ರಸಾದ. ತಾವು ನನ್ನ ಅಪರಾಧ ಕ್ಷಮಿಸಬೇಕು.'' ಎಂದು ಹೇಳಿ ಕೈಮುಗಿದಳು.

ವೆಂಕಟರಾಯರು ಆಕೆಯು ಹೇಳಿದ ಮಾತುಗಳನ್ನು ಸಾಹೇಬರಿಗೆ ಇಂಗ್ಲಿಷಿನಲ್ಲಿ ತಿಳಿಸಿದರು. ಸಾಹೇಬರು ''ಇಂಥವರೂ ಇದ್ದಾರೆಯೆ? ಪರಮಾಶ್ಚರ್ಯ, ಪರಮಾಶ್ಚರ್ಯ, ವೆಂಕಟರಾಯರೆ! ನಾನು ನಿಮ್ಮನ್ನು

ಕಲಾಭಿಮಾನಿಗಳೆಂದು ಮೆಚ್ಚಿ ಕೊಂಡಾಡುತ್ತಿದ್ದೆ. ನಾನು ಕಲಾಭಿಮಾನಿ ಯೆಂದು ಭಾವಿಸಿಕೊಂಡಿದ್ದೆ. ಆದರೆ ಕಲಾಭಿಮಾನದ ಕಿರೀಟವು ನಮ್ಮಿಬ್ಬರಿಗೂ ಸಲ್ಲದು. ಅದು ಸಲ್ಲುವುದು ಈಕೆಗೇ ಹೊರತು ನಮಗಲ್ಲ.'' ಎಂದು ಇಂಗ್ಲಿಷಿನಲ್ಲಿ ಹೇಳಿದರು. ರಾಯರು ಸಾಹೇಬರು ಆಡಿದ ಮಾತುಗಳನ್ನು ಅವರ ಕೋರಿಕೆಯಂತೆ ನರ್ತಕಿಗೆ ಕನ್ನಡದಲ್ಲಿ ಹೇಳಿ ಸಂತೋಷಾಧಿಕ್ಯದಿಂದ ಕಂಬನಿದುಂಬಿದರು. ನರ್ತಕಿಯು ಕೈಮುಗಿದು ತನ್ನ ಕೃತಜ್ಞತೆಯನ್ನು ಸೂಚಿಸಿದಳು. ಸಾಹೇಬರ ಹೆಂಡತಿಯು ತಾನು ತಪ್ಪು ತಿಳಿವಳಿಕೆಯಿಂದ ಅನ್ಯಾಯವಾಗಿ ಕೋಪಿಸಿಕೊಂಡುದಕ್ಕಾಗಿ ವಿಷಾದಪಡುತ್ತಿದ್ದುದಾಗಿಯೂ, ಚಿಕ್ಕ ವಯಸ್ಸಿನವಳಾದ ನರ್ತಕಿಯ ಮನಸ್ಸಿನ ಭಾವೋನ್ನತಿಗೆ ತಾವು ಬೆರಗಾದುದಾಗಿಯೂ ಆಕೆಗೆ ತಿಳಿಸಬೇಕೆಂದು ವೆಂಕಟರಾಯರಿಗೆ ಹೇಳಿ, ಕಲಾಭಿಮಾನದ ಸಂದಾದೀಪಕ್ಕೆ ತಮ್ಮ ಕಿರಿಯ ಕಾಣಿಕೆಯಾಗಿ ಆಕೆಗೆ ನೂರು ರೂಪಾಯಿಗಳನ್ನು ಕೊಡುವುದಾಗಿ ಸೂಚಿಸಿದರು.

# ನಂಬಲಾಗದ ನಿಜ

ವೆಂಕಟಲಕ್ಷ್ಮಮ್ಮನು ಕೊಟಡಿಯೊಳಕ್ಕೆ ಹೋದಾಗ ಅವಳ ಗಂಡ ವೇಣುಮಾಧವನು ಪನ್ನೀರಿನಲ್ಲಿ ಒದ್ದೆಮಾಡಿದ ಬಿಳಿಯ ಬಟ್ಟೆಯನ್ನು ಬೆಳ್ಳಿಯ ತಟ್ಟೆಯಲ್ಲಿಟ್ಟು ಮಲ್ಲಿಗೆಯ ದಂಡೆಗೆ ಪನ್ನೀರನ್ನು ಚುಮುಕಿಸುತ್ತಿದ್ದನು. ಅವಳು ನಕ್ಕುದನ್ನು ಕಂಡು ಅವನೂ ನಕ್ಕನು. ವೆಂಕಟಲಕ್ಷ್ಮಮ್ಮನು "ತಟ್ಟೆಯೊಳಗೆ ಹೂವಿಡುವ ಕೆಲಸ ಇನ್ನೂ ಮುಗಿಯಲಿಲ್ಲವೆ?" ಎಂದಳು.

"ಆ ಕೆಲಸ ಮುಗಿಯೋದಿರಲಿ. ಅದು ಅಷ್ಟು ಸುಲಭವಲ್ಲ, ನೀನೇಕೆ ನಕ್ಕದ್ದು? ಅದನ್ನು ಮೊದಲು ಹೇಳು."

"ನಗದೆ ಇನ್ನೇನು ಮಾಡಲಿ? ಮಲ್ಲಿಗೆ ಹೂವಿನ ದಂಡೆಗೆ ಪನ್ನೀರು ಚುಮುಕಿಸುವ ಜಾಣರನ್ನು ನೋಡಿದೆ. ನಗು ಬಂತು. ಈ ಬುದ್ಧಿವಂತಿಕೆ ಎಲ್ಲರಿಗೂ ಬಾ ಅಂದರೆ ಬಂದೀತೆ? ಅದಕ್ಕೂ ಪುಣ್ಯವಿರಬೇಕು."

"ನೀನು ಹೇಳಿದ್ದು ನಿಜ. ನನಗೆ ತೋರಲೇಬೇಡವೆ? ಬರಿಯ ಒದ್ದೆ ಬಟ್ಟೆಯನ್ನೇ ಸುತ್ತಿಡಬೇಕಾಗಿತ್ತು. ನನ್ನ ಬುದ್ಧಿ ಸರಿಯಾಗಿಲ್ಲ. ಅವರು ಇವೊತ್ತು ಬರ್ತಾರೋ ಇಲ್ಲವೋ—ಎಂತ ಸಂಶಯ. ಎರಡು ಸಲ ಹೋದಾಗಲೂ ಸಿಕ್ಕಲಿಲ್ಲ. ಇಷ್ಟು ಹೊತ್ತಿಗೆ ಊರಿಗೆ ಬಂದಿರಬೇಕು. ಆದರೂ............"

"ಈಗ ಹ್ಯಾಗೂ ಇನ್ನೊಂದು ಸಲ ಹೋಗ್ತೀರಲ್ಲಾ! ಊರಿಗೆ ಬಂದಿದ್ದರೆ ಸಂದೂಕದಲ್ಲಿ ಕೂತಿರೋದಿಲ್ಲವಲ್ಲಾ! ಕಂಡೇ ಕಾಣ್ತೀರಿ. ಕರೆದರೆ ಬಂದೇ ಬರ್‍ತಾರೆ. ಅದಕ್ಕೆ ಇಷ್ಟು ಯೋಚನೆಯೇ?"

"ನನ್ನ ಸಂಕಟ ನಿನಗೆ ಹೇಗೆ ತಿಳಿಯುತ್ತೆ, ಹೇಳು. ಅವರು ಅರಮನೆ ವಿದ್ವಾಂಸರು. ಅವರು ನಮ್ಮ ಮನೆಗೆ ಬಂದರೆ ಬಡವನ ಮನೆಗೆ ಭಾಗ್ಯಲಕ್ಷ್ಮಿ ಬಂದ ಹಾಗೆ."

"ಹಾಗಾದರೆ ಅವರು ನೆರಿ ಚಿಮ್ಮಿಕೊಂಡು ಕಾಲುಸರಪಣಿ ಝುಣಝುಣ ಅನ್ನಿಸಿಕೊಂಡು ಬರ್ತಾರೆ ಅನ್ನಿ; ಭಾಗ್ಯಲಕ್ಷ್ಮಿ ಬಂದರೆ ಹಾಗೆ ತಾನೆ ಬರಬೇಕು?"

"ತೆಗೆದೆಯಲ್ಲೇ ನಿನ್ನ ಹರಟೀನ! ನಾನು ಗಾದೆ ಸಾಮತಿ ಹೇಳಿದರೆ ಏನೇನೋ ಪ್ರತಿಷ್ಠೆ ತೆಗೆದಿದ್ದಾಳೆ. ನಿನಗ್ಯಾಕೆ ಈ ಕೊಟಡಿ ಪಾರುಪತ್ಯ? ಅವರು ಬಂದರೆ ಮನೆಗೊಂದು ಭೂಷಣ. ನಮ್ಮ ಗುಂಡನಿಗೊಂದು ಹೆಮ್ಮೆ. ಅವರು ಬಂದರೆ ಗುಂಡ ತನ್ನಿಂದ ಸಾಧ್ಯವಿರುವಷ್ಟೂ ಭರ್ಜರಿಯಾಗಿ ನುಡಿಸುತ್ತಾನೆ. ಹರಿಕಾಂಬೋದಿ ಕಿವೀ ತುಂಬ ಕೇಳಿಬಿಡೋಣವೆಂತ ಹಾಳು ಆಶೆ. ಅದಕ್ಕೆ ಹೇಳ್ದೆ ಅಷ್ಟೆ."

"ಓಹೋ ಆಗಲೇ ಕಸೇ ಅಂಗಿ ಕಟ್ಟಿಕೊಂಡು ಸಿದ್ಧವಾಗಿದ್ದೀರಿ. ಖಂಡುಗ ಹೊತ್ತುಕೊಂಡು ಕತೆ ಕೇಳಿದರೂ ಅಂತ ನನಗ್ಯಾಕೆ ಈ ಮಾತು! ನನಗೆ ಕೆಲಸ ಬಿದ್ದಿದೆ. ರಾತ್ರಿ ಔತಣದ ಹೊತ್ತಿಗೆ ಅಡಿಗೆ ಮಾಡಿ ಮುಗಿಸ ಬೇಕು. ಮಡಿ ಉಟ್ಕೊಳ್ಳೋಕೆ ಹೋಗ್ತೀನಿ. ಅಲ್ಲಾ, ಮಾತಿಗೆ ಹೇಳ್ತೀನಿ. ಅವರು ಯಾರ್‍ಯಾರೋ ಬಂದರೆ ಮನೆಗೆ ಭೂಷಣ ಅಂದಿರೇ ಹೊರತು, ನಾನು ಮನೇಲಿರೋದು ಭೂಷಣ ಅಂತ ಒಂದು ದಿನವಾದರೂ ಹೇಳಿದ್ದೀರಾ ನೀವು? ಇವತ್ತು ತಂದಿರೋ ಅಂಥಾ ಹೂವಿನ ದಂಡೆ ಎಂದಾ ದರೂ ನನಗೆ ತಂದಿದ್ದೀರಾ ನೀವು?" ಎಂದು ವೆಂಕಟಲಕ್ಷ್ಮಮ್ಮನು ನಕ್ಕಳು.

"ಸದ್ಯ ನಿನ್ನ ಧರ್ಮಕ್ಕೆ ಸುಮ್ಮನಿರೇ. ಗುಂಡ ಬರುವ ಹೊತ್ತು. ಅವನೇನಾದರೂ ಈ ಮಾತು ಕೇಳಿದ್ದರೆ ಗತಿಯೇನು? ನಾನು ಹೋಗ್ತೇನೆ. ಎಂದು ಉತ್ತರ ಹೇಳಿ ವೇಣುಮಾಧವನು ಹೊರಟುಹೋದನು. ಅವನು ಹೋದುದು ಅರಮನೆ ವಿದ್ವಾಂಸರ ಮನೆಗೆ. ಅವರು ಇನ್ನೂ ಊರಿಗೆ ಬಂದಿರಲಿಲ್ಲ. ವೇಣುಮಾಧವನ ತಲೆಯ ಮೇಲೆ ಆಕಾಶವೇ ಕಳಚಿ

ಬಿದ್ದಂತಾಯಿತು. ಆದರೂ ಅವನು ವಿದ್ವಾಂಸರ ಪತ್ನಿಯೊಡನೆ "ಯಜಮಾನರು ಊರಿಗೇನಾದರೂ ಬಂದರೆ, ಕೋಟೆಯಲ್ಲಿರುವ ವೇಣುಮಾಧವರಾಯನ ಮನೆಗೆ ದಯಮಾಡಿಸಬೇಕೆಂತ ತಿಳಿಸಬೇಕು, ತಾಯಿ. ರಾತ್ರಿ ಭೋಜನಕ್ಕೂ ಅಲ್ಲೇ ಸಿಲ್ಲಬೇಕೆಂತಲೂ ಅರಿಕೆ ಮಾಡಿಕೊಂಡೆ – ಅಂತ ಹೇಳಿ. ನನ್ನ ಪುಣ್ಯ ಹೇಗಿದೆಯೋ ಕಾಣೆ. ನಾನು ಬೆಳಗ್ಗೆ ಹೇಳಿದ್ದ ಹಾಗೆ ಗೋಟುವಾದ್ಯದ ಗುಂಡಯ್ಯನವರ ಕಚೇರಿ – ಅಂತ ಅರಿಕೆ ಮಾಡಿ, ತಾಯಿ" ಎಂದನು. ವಿದ್ವಾಂಸರ ಹೆಂಡತಿಯು ಅರೆವಾಸಿಯಾಗಿ ಬಾಗಿಲಿನ ಹಿಂದೆ ನಿಂತು ಸೀರೆಯ ಸೆರಗಿನಿಂದ ಬಾಯಿ ಮುಚ್ಚಿಕೊಂಡು "ಊ ಆಗಲಿ" ಎಂದರು. ಅರಮನೆ ವಿದ್ವಾಂಸರು ಊರಿಗೆ ಬರುವರೋ ಇಲ್ಲವೋ ಎಂಬ ಆಲೋಚನೆಯಲ್ಲಿ ಮಗ್ನನಾಗಿ ವೇಣುಮಾಧವನು ಯಂತ್ರದ ಬೊಂಬೆಯಂತೆ ಅವರ ಮನೆಯಿಂದ ಹೊರಟನು. ಅವರು ಆಸ್ಥಾನದ ಸಂಗೀತ ವಿದ್ವಾಂಸರಲ್ಲಿ ಪ್ರಮುಖರಾಗಿ, ಮಹಾಪ್ರಭುಗಳವರ ಅನುಗ್ರಹಕ್ಕೆ ಪಾತ್ರರಾಗಿದ್ದವರು. ಅವರ ವಿದ್ವತ್ತಿಗೆ ಸಮಾನವಾದ ವಿನಯವೂ ಅವರಲ್ಲಿದ್ದಿತು. ಅವರು ತನ್ನ ಮನೆಗೆ ಬಂದು ಗುಂಡಯ್ಯನ ಗೋಟುವಾದ್ಯವನ್ನು ಕೇಳಬೇಕೆಂದು ವೇಣುಮಾಧವನ ಆಶೆ. ಮೊದಲು ಅವನ ಆಶೆಯು ಎಷ್ಟು ಪ್ರಬಲವಾಗಿದ್ದಿತೋ ಅಷ್ಟೇಮಟ್ಟಿನ ನಿರುತ್ಸಾಹವು ಅರಮನೆ ವಿದ್ವಾಂಸರ ಮನೆಯನ್ನು ಬಿಟ್ಟಾಗ ಅವನ ಮನಸ್ಸನ್ನು ಕುಗ್ಗಿಸಿದ್ದಿತು.



ಶ್ರೀರಾಮಚಂದ್ರನು ಕಲಾಲೋಲನೆಂಬ ಭಾವನೆಯನ್ನು ಸ್ಫುಟಗೊಳಿಸಿ ಆತನನ್ನು ವರ್ಣಿಸುವಲ್ಲಿ, ತ್ಯಾಗರಾಜರು ಆತನನ್ನು ರಸಿಕಶೇಖರನೆಂದು ಸಂಬೋಧಿಸಿ ಒಂದು ಕೀರ್ತನೆಯನ್ನು ರಚಿಸಿದ್ದಾರೆಂಬ ಸಂಗತಿಯನ್ನು ನಾನು ಅರಿಕೆ ಮಾಡಬೇಕಾದ ಆವಶ್ಯಕತೆಯೇ ಇಲ್ಲ. ವೇಣುಮಾಧವನ ರಸಿಕತನವನ್ನು ನೋಡಿದರೆ ಅವನು "ರಸಿಕಶೇಖರ"ನಾದ ಶ್ರೀರಾಮಚಂದ್ರನ ಭಕ್ತನೆನಿಸಲು ತೀರ ಅರ್ಹನಾಗಿದ್ದನೆನ್ನಬಹುದು.

ಅಂದಿನ ಸಂಗೀತಗೋಷ್ಠಿಗೆ ಅವನು ತನ್ನ ಮನೆಯ ಹಜಾರವನ್ನಲಂಕರಿಸಿದ್ದ ಬಗೆಯನ್ನು ಕಂಡು ತಲೆದೂಗಿದವರನೇಕರು, "ವೇಣುಮಾಧವರಾಯನ ವಿತರಣೆ ಅಚ್ಚುಕಟ್ಟು ಯಾರಿಗೂ ಬರೋದಿಲ್ಲ, ಅನೇಕ ಮಹಡೀಮನೆ ಮುಂಕಣ್ಣುಗಳಿಗೆ ದೇವರು ಕೊಟ್ಟಿರೋ ಸಂಪತ್ತೆಲ್ಲ ಈ ಮಹಾಶಯನಿಗೇ ಇದ್ದರೆ ಇನ್ನೆಷ್ಟು ಸೊಗಸು ಮಾಡ್ತಿದ್ದನೋ," "ಇದ್ದರೆ ಎರಡು ದಿನವಾದರೂ ಹೀಗೆ ಸುಖವಾಗಿರಬೇಕು ; ಗಾಣದೆತ್ತಿನ ಹಾಗೆ ಬಾಳಿ ಬೂದಿಯಾದರೇನು ಬಂತು ಭಾಗ್ಯ," ಎಂದು ಮುಂತಾಗಿ "ಪಿಸಪಿಸನೆ" ಮಾತನಾಡಿಕೊಂಡರು. ಗೋಟುವಾದ್ಯದ ಗುಂಡಯ್ಯನ ಮುಖವಂತೂ ಸಂತೋಷ ಪಾರವಶ್ಯದಿಂದ ಅರಳಿ ಊರಗಲವಾಗಿದ್ದಿತು. ತಾನು ಕಣಿವೆ ಕೆಳಕ್ಕೆ ಹೋಗಿದ್ದು ಗೋಟು ವಾದ್ಯದಲ್ಲಿ (ಮಹಾನಾಟಕ ವೀಣೆಯನ್ನು ನುಡಿಸುವುದರಲ್ಲಿ) ಪಾರಂಗತನಾಗಿ ಮೈಸೂರು ನಗರಕ್ಕೆ ಹಿಂತಿರುಗಿದ ಮೇಲೆ ಮೊಟ್ಟ ಮೊದಲನೆಯ ಸಂಗೀತ ಗೋಷ್ಠಿಯು ತನ್ನ ಬಾಲ್ಯಮಿತ್ರನ ಮನೆಯಲ್ಲಿ ನಡೆಯುವಂತಾಯಿತೆಂಬುದೇ ಅದಕ್ಕೆ ಕಾರಣ. ಕೆಳೆತನದ ಬಗೆಬಗೆಯ ಸವಿನೆನಪುಗಳಿಂದ ಅವನ ಹೃದಯುವು ಸೊಂಪೇರಿ, ಸುಖವೂ ದುಃಖದಂತೆ ಸಹಿಸಲಶಕ್ಯವೆನಿಸು ತ್ತಿದ್ದಿತು. ಅಂದಿನ ಆನಂದವು ಎಷ್ಟು ಹೆಚ್ಚಿನದೋ ಅವನ ಉತ್ಸಾಹ ಶ್ರದ್ಧೆಗಳೂ ಅಷ್ಟೇ ಹೆಚ್ಚಿನವಾಗಿದ್ದುವು. ಆದಕಾರಣ ಅವನ ಮನೋ ಧರ್ಮವು ಬಹಳ ಪ್ರಸನ್ನವಾಗಿ ಅವನ ಕೈಚಳಕಕ್ಕೆ ಕಳೆಯೇರಿದ್ದಿತು. ಅದರ ಫಲಿತಾಂಶವಾಗಿ ಎಂದಿಗಿಂತ ಹೆಚ್ಚಾಗಿ ಅವನು ತಾನು ಸಂಗೀತ ಸುಧೆಯ ಸವಿಯನ್ನನುಭವಿಸಿ, ಸಭಿಕರಿಗೂ ಅದನ್ನು ಮೊಗೆಮೊಗೆದು ಬಡಿಸು ತ್ತಿದ್ದನು. ವಾದ್ಯವನ್ನು ನುಡಿಸುವುದು ನಿಂತಾಗ ಅವರಿಗೆ ಐಹಿಕ ಪ್ರಪಂಚದ ಪರಿಜ್ಞಾನ; ಮತ್ತೆ ಅದು ಪ್ರಾರಂಭವಾದಾಗ ಅವರಿಗೆ ಅನಿರ್ವಚನೀಯ ವಾದೊಂದು ಬಗೆಯ ಮೋಹನಿದ್ರೆ. ರಾಗಜ್ಞಾನವಿಲ್ಲದವರೂ ಆನಂದಾನು ಭವ ಮಾಡುತ್ತಿದ್ದುದು ಅಂದಿನ ವಿಶೇಷ. ಕೆಲವರು ರಸಿಕರಂತೂ ತಾವು ಬಾಯಿಗೆ ಆಶೆಯಿಂದ ಹಾಕಿಕೊಂಡಿದ್ದ ಚಿಗುರು ವೀಳೆಯದೆಲೆಯನ್ನು ಅಗಿಯಬೇಕೆಂಬ ಪರಿಜ್ಞಾನವೂ ಇಲ್ಲದಷ್ಟು ಮಟ್ಟಿಗೆ ಮೈಮರೆತು ಗಾನರಸ ಪಾನ ಮಾಡುತ್ತಿದ್ದರು. ತಾಂಬೂಲದ ತಟ್ಟೆಯು ಸಿದ್ಧವಾಗಿರಬೇಕಾದುದು

ಸಂಗೀತ ಗೋಷ್ಠಿಯಲ್ಲಿ ಮೊಟ್ಟಮೊದಲನೆಯ ಮುಖ್ಯ ಸಂಪ್ರದಾಯವೆಂಬುದ ನ್ನಂತೂ ಪ್ರತ್ಯೇಕವಾಗಿ ಹೇಳಬೇಕಾದುದೇ ಇಲ್ಲ. ತಮ್ಮ ಕಷ್ಟ ಸುಖ ಗಳನ್ನೂ ಗೃಹಕೃತ್ಯಗಳನ್ನೂ ಕುರಿತು ಮೆಲ್ಲಗೆ ಮಾತನಾಡಿಕೊಳ್ಳಲು ಸಂಗೀತಗೋಷ್ಠಿಯಲ್ಲೇ ತಕ್ಕ ಅವಕಾಶವೆಂದು ಭಾವಿಸಿ ಅಲ್ಲಿಗೆ ಹೋಗು ವವರೂ ಉಂಟು. ಅಂತಹವರು ಕೂಡ, ಅಂದು ನಿಶ್ಶಬ್ದವಾಗಿ ಕುಳಿತು ತಲೆದೂಗುತ್ತಿದ್ದರು.

ಸ್ವಲ್ಪ ಹೊತ್ತಾದ ಬಳಿಕ ಗುಂಡಯ್ಯನು ತನ್ನದೇ ಆದೊಂದು ವೈಶಿಷ್ಟ್ಯದಿಂದ ಕೂಡಿ ಬಹು ಸೊಗಸಾಗಿ ರಾಗವೊಂದನ್ನು ನುಡಿಸಿದನು. ಒಂದೂವರೆ ಗಳಿಗೆಗಿಂತ ಹೆಚ್ಚು ಹೊತ್ತು ಅದನ್ನು ಕೇಳಿಯೂ ತಮ್ಮ ಸಂಗೀತ ಪ್ರತಿಭೆಗೆ ತಾವೇ ಅಚ್ಚರಿಪಟ್ಟುಕೊಂಡಿದ್ದ ಸರಸ್ವತಿಯ ಮರಿಕು ಗಳೆಂದು ತಿಳಿದುಕೊಂಡಿದ್ದವರು ಕೆಲವರಿಗೆ ಅದಾವ ರಾಗವೆಂಬುದೇ ತಿಳಿಯು ಲಿಲ್ಲ. ಗುಂಡಯ್ಯನು ರಾಗವನ್ನು ನುಡಿಸುವುದನ್ನು ನಿಲ್ಲಿಸಿದ ಕೂಡಲೆ ಅವರಲ್ಲಿ "ಗುಸು ಗುಸು" ಪ್ರಾರಂಭವಾಯಿತು. ಕೆಂಪು ಬಣ್ಣದ "ಗದ್ದೆಮಡಿ" ರುಮಾಲನ್ನು ಧರಿಸಿದ್ದ ರಸಿಕನೊಬ್ಬನು "ಸ್ವಾಮಿ, ತಾವು ಈಗ ನುಡಿಸಿದ್ದು ಶಂಕರಾಭರಣ ರಾಗವಲ್ಲವೆ ? ಕಾಲ ಕೆಟ್ಟುಹೋಯಿತು. ಅದು ಶಂಕರಾಭರಣಾ ಅಂತ ಬಡುಕೊಂತಾ ಇದ್ದೇನೆ. ಈ ಜನ ಕೇಳೋದಿಲ್ಲ. ದೊಡ್ಡೋರೆಂಬ ಮರ್ಯಾದೆಯೇ ಇಲ್ಲ, ಇವರಿಗೆ'' ಎಂದನು.

ಗುಂಡಯ್ಯನು ನಗುತ್ತ ''ಹೇಳಯ್ಯ, ವೇಣು, ರಾಗ ಯಾವುದು ಅಂತಾರೆ. ಸಂಗೀತದ ಏರ್ಪಾಡು ಮಾಡಿದ ಗೃಹಸ್ಥ ನೀನೇ ತಾನೇ ಅದು ಯಾವುದು ಅಂತ ಹೇಳಬೇಕಾದ್ದು" ಎಂದನು. ವೇಣುಮಾಧವನು "ಗುಂಡ, ಗುಂಡ, ಹರಿಕಾಂಬೋದಿ ರಾಗ ಹೀಗೆ ಬಾರಿಸಿದ್ದು ಎಲ್ಲೂ ಕೇಳಿರಲಿಲ್ಲವೋ! ನಿನಗೆ ಇದಕ್ಕಾಗಿ ನನ್ನ ಪ್ರಾಣ ಕೊಟ್ಟರೂ ತೀರದೋ! ಅದೇನು ಬಾನಿ! ಅದೇನು ಸೊಗಸು!" ಎಂದು ಹೇಳಿ ಆನಂದಾಧಿಕ್ಯದಿಂದ ಕಂಬನಿದುಂಬಿದನು. ಗುಂಡಯ್ಯನು ಅವನ ಕಂಬನಿಯು ರತ್ನಕಂಕಣಕ್ಕಿಂತ ಹೆಚ್ಚಿನ ಮನ್ನಣೆಯೆಂದುಕೊಂಡು ಹಿಗ್ಗಿ "ನನ್ನ ಸಂಗೀತಕ್ಕೂ ಮೆಚ್ಚಿ

ಹರಿಕಾಂಬೋದಿ ರಾಗಕ್ಕೆ ಕಣ್ಣೀರು ಸುರಿಸೋ ಹುಚ್ಚ ನೀನೊಬ್ಬ ಇದ್ದೀ ಯಲ್ಲ." ಎಂದನು. ಅವನು ಕೀರ್ತನೆ ನುಡಿಸಲು ಪ್ರಾರಂಭಿಸಬೇಕೆಂದಿರು ವಷ್ಟರಲ್ಲಿ "ಅಂಥಾ ಹುಚ್ಚ ಇನ್ನೊಬ್ಬನೂ ಇದ್ದಾನೆ, ಸ್ವಾಮಿ" ಎಂದು ಕೊಂಡು ಬೀದಿಯ ನಡುವೆಯಿಂದ ಒಬ್ಬರು ಹಜಾರಕ್ಕೆ ಬಂದರು. ಎಲ್ಲರೂ ಕಕ್ಕಾಬಿಕ್ಕಾದರು. ನೋಡಿದರೆ ಅರಮನೆ ವಿದ್ವಾಂಸರು!

ಅರಮನೆ ವಿದ್ವಾಂಸರು ಬಂದ ಬಳಿಕ ಅತಿಥಿಗಳೆಲ್ಲರಿಗೂ ಸಂಗೀತ ವನ್ನು ಕೇಳಲು ಆದರವು ಹೆಚ್ಚಿ, ಎರಡು ಕಿವಿಗಳು ನಾಲ್ಕು ಕಿವಿಗಳಾದುವು. ಗುಂಡಯ್ಯನ ಉತ್ಸಾಹವನ್ನು ವರ್ಣಿಸಲು ಸಾಧ್ಯವೇ ಇಲ್ಲ. ಮೊದಲಿ ಗಿಮ್ಮಡಿಯಾದ ಸೊಗಸಿನಿಂದ ಅವನು ಗೋಟುವಾದ್ಯವನ್ನು ನುಡಿಸಿದನು. ಅರಮನೆ ವಿದ್ವಾಂಸರು ನಡುವೆಯಿಂದ ಮನೆಯೊಳಕ್ಕೆ ಬಂದಾಗಿನ ಆಶ್ಚರ್ಯವು ಕೊಂಚ ಕಡಮೆಯಾದ ಮೇಲೆ ವೇಣುಮಾಧವನು "ನಡುವೆಯಲ್ಲಿಯೇ ನಿಂತುಬಿಡುವುದೇ! ತಾವು ಒಳಕ್ಕೆ ದಯಮಾಡಬೇಕಾಗಿತ್ತು" ಎಂದುದಕ್ಕೆ ಅವರು "ವಾದ್ಯ ನುಡಿಯುತ್ತಿರುವಾಗ ಆ ಮಹಾತಾಯಿ ಸರಸ್ವತೀದೇವಿ ಲಾಸ್ಯವಾಡುತ್ತಿರುತ್ತಾಳೆ. ಮಧ್ಯದಲ್ಲಿ ಕೋಡಂಗಿಯ ಹಾಗೆ ನುಗ್ಗಿ ದೇವಿಯ ನರ್ತನ ಕಾಲದಲ್ಲಿ ಅಪಚಾರ ಮಾಡಿದವರುಂಟೆ? ಅದಕ್ಕೋಸ್ಕರವೇ ನಾನು ನಡುವೆಯಲ್ಲೇ ನಿಂತಿದ್ದೆ." ಎಂದು ಉತ್ತರ ಹೇಳಿದರು. ಆ ಮಾತು ಗಳನ್ನು ಕೇಳಿ ಗುಂಡಯ್ಯನಿಗೆ ರೋಮಾಂಚನವಾಯಿತು. ಕಣ್ಣುಗಳಿಂದ ಎರಡು ಹನಿಗಳುದುರಿದವು. ಅವನ ಉತ್ಸಾಹವೂ, ವಾದ್ಯವನ್ನು ನುಡಿಯಿ ಸುವ ಸೊಗಸೂ ಮೊದಲಿಗಿಮ್ಮಡಿಯಾದುದರಲ್ಲಿ ಆಶ್ಚರ್ಯವೇನು?

ಸಂಗೀತ ಗೋಷ್ಠಿಯು ಮುಗಿದ ಮೇಲೆ ಅರಮನೆ ವಿದ್ವಾಂಸರು "ಬ್ರಹ್ಮಾನಂದ, ಬ್ರಹ್ಮಾನಂದ, ಬ್ರಹ್ಮಾನಂದವಾಗ್ಹೋಯ್ತು, ಸ್ವಾಮಿ. ನಾನು ಇನ್ನೇನೂ ಹೇಳಲಾರೆ. ಭಗವಂತ ನಿಮಗೆ ದೀರ್ಘಾಯುಸ್ಸು ಕೊಟ್ಟು ನಿಮ್ಮನ್ನು ಸುಖವಾಗಿಟ್ಟಿರಲಿ. ಹರಿಕಾಂಬೋದಿ ರಾಗದಲ್ಲಿ ನನಗೆ ಪ್ರಾಣ. ಆದರೆ ಆ ರಾಗ ನಿಮಗೇ ಮೀಸಲು." ಎಂದರು. ವೇಣುಮಾಧವನು ಕೊಂಚ ನಕ್ಕು, "ಹರಿಕಾಂಬೋದಿ ರಾಗದ ಹುಚ್ಚು ನನಗೊಬ್ಬನಿಗೇ ಅಂತಿದ್ದೆ. ಗುರುಗಳಷ್ಟು ದೊಡ್ಡವರಿಗೂ ಅದರಲ್ಲಿ ಪ್ರೀತಿ ಅಂತ ತಿಳಿದು

ಧನ್ಯನಾದೆ." ಎಂದನು. ಗುಂಡಯ್ಯನು ಉತ್ಸಾಹ ಕೃತಜ್ಞತೆಯಿಂದ ಉಬ್ಬಿ "ಎಲ್ಲಾ ತಮ್ಮ ಆಶೀರ್ವಾದ. ಆ ರಾಗ ನುಡಿಸಿ ನಾನು ನನ್ನ ಜನ್ಮ ಸಾರ್ಥಕ ಮಾಡಿಕೊಂಡರೆ ಸಾಕು. ಮುಖ್ಯ, ನಾನು ವೇಣೂ ಸ್ನೇಹಿತ ನಾದದ್ದಕ್ಕೆ ಅವನು ತಲೆ ತಗ್ಗಿಸುವ ಹಾಗೆ ಮಾಡಲಿಲ್ಲವಲ್ಲ; ಅದೇ ನನ್ನ ಸಂತೋಷ. ತಮ್ಮಂಥವರು ಒಬ್ಬರು ಕೇಳಿ ಆಶೀರ್ವಾದ ಮಾಡಿಬಿಟ್ಟರೆ ನಾನು ಬದುಕಿದೆ. ಏನು ದೋಷವಿದ್ದರೂ ಮನ್ನಿಸಬೇಕು." ಎಂದನು. ಆ ಬಳಿಕ ಹೂಮಾಲೆಯ ಸಮರ್ಪಣೆ, ಔತಣದ ಊಟ ಮುಂತಾದ ಉಳಿದ ಕಾರ್ಯಕಲಾಪಗಳೆಲ್ಲ ಸಾಂಗವಾಗಿ ನೆರವೇರಿದುವು.

* * * *

೩

ಒಂದು ದಿನ ಸೂರ್ಯೋದಯವಾಗಿ ಎಂಟು ಅಥವಾ ಹತ್ತು ಘಳಿಗೆಗಳ ವೇಳೆಯಲ್ಲಿ ವೇಣುಮಾಧವನು ತನ್ನ ಮಿತ್ರನ ಮನೆಗೆ ಹೋದನು. ಸ್ವಲ್ಪ ಹೊತ್ತು ಮಾತನಾಡಿದ ಬಳಿಕ ಅವನು "ಗುಂಡ, ಗುಂಡ, ಜೋಯಿಸರು ದಾರಿಯಲ್ಲಿ ಸಿಕ್ಕಿದ್ದರು. ನಿಮ್ಮ ಮನೆಗೇ ಬಂದಿದ್ದರಂತೆ. ಅದೇನಯ್ಯ ಜೋಯಿಸರ ಸವಾರಿ ಬಂದಿದ್ದ ಕಾರಣ?" ಎಂದನು.

"ಅವರು ಬಂದಿದ್ದ ಕಾರಣ ಹಾಗಿರಲಿ. ವೇಣು, ನನ್ನ ಆಯಸ್ಸು ನಾಳೆಗೆ ಮುಗಿದೇ ಹೋಗುತ್ತಂತೆ. ನಾಳೆ ಕಳೆದು ಬದುಕಿದರೆ ಇನ್ನೂ ಬಹಳ ದಿನ ಬದಕ್ತೇನಂತೆ. ಅಂತು ನಾಳೆ ಸಾಯ್ತೇನೆ. ಹೋಗಿ ಬರಲೇನಯ್ಯ?"

"ನಿನ್ನ ತಲೆ. ಹೋಗಿ ಬರ್ತಾನಂತೆ. ಯಾವಾಗಲೂ ಹುಡುಗಾಟವೇ. ಅರಮನೆ ವಿದ್ವಾಂಸನಾಗಿದ್ದಾನೆ. ಖಾವಂದರೂ ಕೂಡ ಮೆಚ್ಚಿ ಕಣ್ಣಲ್ಲಿಟ್ಟು ಕೊಂಡು ಕಾಪಾಡ್ತಾ ಇದ್ದಾರೆ. ಇನ್ನೂ ಘನವಿಲ್ಲ, ಗಂಭೀರವಿಲ್ಲ; ಎಂದಿನಂತೆ ಹುಡುಗಾಟ."

"ಘನ ಗಂಭೀರ ಅದೆಲ್ಲಾ ಬರಬೇಕಾದರೆ ನೀವೆಲ್ಲಾ ಮರ್ಯಾದೆ ಮಾಡಿದ್ದರೆ ಬರ್ತಾ ಇತ್ತು. ನೀನು ನನ್ನ ಮಹಾನಾಟಕ ವೀಣಾ ವಿದ್ವಾನ್ ಮಹದೇವಶಾಸ್ತ್ರಿ – ಅಂತ ಬಾಯಿತುಂಬ ಕರೆದಿದ್ದಿಯೇನಯ್ಯ ಎಂದಾದರೂ? ಏನೋ ಜಂಭ ಹೊಡೀತಾನೆ! ಬುದ್ಧೀ ಹೇಳ್ತಾನೆ ನಂಗೆ!"

"ನಾನು ಹಾಗೆಲ್ಲಾ ಕರೆಯೋದಿಲ್ಲ. ನಾನು ಕರೆಯೋದು ಹರಿ ಕಾಂಬೋದಿ ಪ್ರವೀಣ ಗೋಟುವಾದ್ಯದ ಗುಂಡನೆಂದೇ. ಮಹಾನಾಟಕ ವೀಣಾ ವಿದ್ವಾಂಸನೆಂತ ನಿನ್ನ ಕರೆಯೋದು ಖಂಡಿತ ಈ ಜನ್ಮದಲ್ಲೇ ಇಲ್ಲ. ಹೆಚ್ಚು ಜನಗಳಿದ್ದ ಸಭೆಯಲ್ಲಿ ಕರೆಯಬೇಕಾದಾಗ ಗುಂಡಯ್ಯ ಅನ್ನಬೇಕಾ ದರೇ ನನಗೆ ಪ್ರಾಣ ಹೋಗುತ್ತೆ. ಆಗಲೂ ನನ್ನ ಮನಸ್ಸು ನಿನ್ನ ಮೇಲಿನ ಪ್ರೀತಿಯಿಂದ ಗುಂಡ, ಗುಂಡ, ಅನ್ನುತ್ತಲೇ ಇರುತ್ತೆ."

"ಇನ್ನು ಮೇಲೆ ನೀನು ಯಾವ ಸಭೆಯಲ್ಲಿ ಗುಂಡಯ್ಯ ಅಂತ ಕರೆದೀಯೋ? ಬಲೀಂದ್ರ ಭೂಲೋಕಕ್ಕೆ ದೀಪಾವಳೀ ಹಬ್ಬದ ದಿನ ಬಂದಿದ್ದ ಹಾಗೆ ಇವೊತ್ತು ಒಂದು ದಿನ ನನ್ನ ವೈಭವ. ಮಧ್ಯಾಹ್ನ ಅರಮನೇಲಿ ಕಚೇರಿ ಆದರೂ ಆಗಬಹುದು. ಇವೊತ್ತು ದೀಪಾವಳಿಯೂ ಆಗಿದ್ದರೆ ನಾನೇ ಬಲೀಂದ್ರನಾಗಬಹುದಾಗಿತ್ತು. ಹೋಗಿಬರಲೇ ವೇಣು?"

"ನಗಬೇಡ, ಗುಂಡ. ನನ್ನ ಪ್ರಾಣವೇ ಕಿತ್ತು ಬರ್ತಾ ಇದೆ. ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ ಮಾಡಬೇಡ."

"ನಾಳೆ ಸಂಜೆಯೊಳಗೆ ನಂಗೆ ಗಂಡವಿದೆಯಂತಯ್ಯ. ಜೋಯಿಸರು ಜಾತಕ ನೋಡಿ ಹೇಳಿ ಹೋಗಿದ್ದಾರೆ. ಸಾಯೋನು ನಾನಲ್ಲವೇನಯ್ಯ, ನಾನು ತಾನೇ ಇಲಿ? ನನಗೆ ತಾನೆ ಪ್ರಾಣಸಂಕಟ? ನನ್ನ 'ಬೆಕ್ಕು' ಅಂತೀಯೆ? ನಾನೇನಾದರೂ ಹೋಗಿಬಿಟ್ಟರೆ ನನ್ನ ಹೆಂಡತೀಗೆ ಅನ್ನಾ ಬಟ್ಟೆ ಕೊಡಬೇಕಾದ್ದು ನಿನ್ನ ಭಾರ. ಏನು ಹೇಳ್ತೀ ವೇಣು?"

"ಏನು ಹುಡುಗಾಟವೋ ನಿಂದು? ಕಿಸಿಕಿಸಿ ಅಂತ ನಗ್ತಾನೆ. ಹಾಳು ಹುಡುಗಾಟ. ಇನ್ನು ನಕ್ಕು ನೋಡು. ಹೊಡೆದೇಬಿಡ್ತೇನೆ. ನಾನು ಈಗ ಜೋಯಿಸರ ಮನೆಗೇ ಹೋಗಿ ಕೇಳ್ತೇನೆ, ಎಲ್ಲಾ ಸಂಗತೀನೂ ಕೇಳಿ ಆಮೇಲೆ ಮಾತು. ನಿನ್ನ ಹೆಂಡತೀ ಕೈಲಾದರೂ ಛೀಗುಟ್ಟಿಸೋಣಾ

ಅಂದರೆ ಇದನ್ನೆಲ್ಲಾ ಅವಳಿಗೆ ಹೇಳೋದಕ್ಕಿಲ್ಲ. ನಗು ನಿಲ್ಲಿಸೋ ಮಹಾ ರಾಯಾ."

ಆ ವೇಳೆಗೆ ಬಕ್ಷಿಯವರು ಕಳುಹಿಸಿದವನೊಬ್ಬನು ಅರಮನೆಯಿಂದ ಬಂದನು. ಆ ಅಧಿಕಾರಿಯು ಬಂದುದನ್ನು ಕಂಡು ಗುಂಡಯ್ಯನು ನಗುವನ್ನು ನಿಲ್ಲಿಸಿ, ಅವನನ್ನು ಮಾತನಾಡಿಸಿದನು. ಆಗಂತುಕನು ಆ ತರುವಾಯ "ಮಧ್ಯಾಹ್ನದ ಮೇಲೆ ಅರಮನೇಲಿ ಉತ್ತರ ದೇಶದಿಂದ ಬಂದಿರೋ ಗವಾಯಿಗಳ ಸಿತಾರೂ, ತಮ್ಮ ಮಹಾನಾಟಕ ವೀಣೆಯೂ ಆಗಬೇಕಂತೆ. ಸವಾರಿ ಅಪ್ಪಣೆ ಮಾಡಿದಾಗ, ಅಪ್ಪಣೆ ಮಾಡಿದರೆ ಮಾತ್ರ, ನೀವು ಹರಿಕಾಂಬೋದಿ ರಾಗ ಬಾರಿಸಬೇಕಂತೆ. ಇಲ್ಲದಿದ್ದರೆ ಬಾರಿಸಕೂಡದಂತೆ. ಅದು ಬಿಟ್ಟು ಬೇರೆ ಯಾವುದು ಬೇಕಾದರೂ ಬಾರಿಸಬಹುದಂತೆ. ಬಕ್ಷಿಯವರು ಅಪ್ಪಣೆ ಕೊಡಿಸಿದರು." ಎಂದು ಹೇಳಿ ಹೊರಟುಹೋದನು. ಗುಂಡಯ್ಯನ ಮುಖದ ಮೇಲೆ ಅದುವರೆಗೂ ಇದ್ದ ಸಂತೋಷದ ಕಳೆಗೆ ಗ್ರಹಣ ಹಿಡಿಯಿತು. ಕೊನೆಗೆ ಅವನು "ನೋಡು ವೇಣು, ಗ್ರಹಚಾರ ಫಲ ಹೇಗೆ ತೋರಿಸ್ತಾ ಇದೆ! ಖಾವಂದರವರ ಅಪ್ಪಣೆ ಹೀಗಾಗಬೇಕೆ? ಉತ್ತರ ದೇಶದ ಗವಾಯಿಗಳೆದುರಿಗೆ ನನ್ನ ಮುದ್ದು ಹರಿಕಾಂಬೋದಿ ರಾಗ ಬಾರಿಸುವ ಹಾಗಿಲ್ಲ. ನಾಳೆ ಸಾಯುವ ಬದಲು ನಾನು ಇವೊತ್ತೇ ಸಾಯಬಾರದೆ?" ಎಂದು ಒಂದು ಕ್ಷಣಕಾಲ ಸುಮ್ಮನಿದ್ದು "ವೇಣು, ಇವೊತ್ತು ಇಲ್ಲೇ ಊಟ ಮಾಡೊ" ಎಂದನು.

ಗುಂಡಯ್ಯನು ಖಿನ್ನತೆಯನ್ನು ಮರೆಯುವಂತೆ ಮಾಡುವುದಕ್ಕಾಗಿ ವೇಣುಮಾಧವನು ಸ್ವಲ್ಪ ನಕ್ಕು "ನಾನು ಊಟಕ್ಕೆ ಬರುವುದು ಅಷ್ಟು ಸುಲಭವಲ್ಲ. ಇವೊತ್ತು ಖಾವಂದರು ನಿನಗೇನಾದರೂ ಬಹುಮಾನ ದಯಪಾಲಿಸಿದರೆ, ಆ ಸಂತೋಷಕ್ಕೆ ನಾಳೆ ನೀನು ಔತಣ ಏರ್ಪಡಿಸಿ ನನ್ನ ಊಟಕ್ಕೆ ಕರೆದುಗಿರದರೆ ನಮ್ಮ ಸವಾರಿ ಆಗ ಚಿತ್ತೈಸುತ್ತೆ." ಎಂದು ಉತ್ತರ ಹೇಳಿದನು. ಗುಂಡಯ್ಯನೂ ಸೋಲಲಿಲ್ಲ. ಅವನು "ನಾನು ಊಟ ಮಾಡೋದೇ ಖಾವಂದರು ಕೊಟ್ಟ ಅನ್ನ. ಇನ್ನು ಬಹುಮಾನದ ಆಶೆ ನಾನೇಕೆ ಇಟ್ಟುಕೊಳ್ಳಬೇಕು? ತುಂಬ ಆಶೆ ಪಡಬಾರದು. ಅದು

ಹೋಗಲಪ್ಪ. ನಾಳೆ ಖಂಡಿತ ಸೊಗಸಾದ ಭರ್ಜರಿ ಔತಣ. ನಿನಗೆ ಇಷ್ಟವಿರೋ ಅಡಿಗೆಗಳೇ. ರಾಯರು ಬಾಯಿಬಿಡೋ ಅಡಿಗೆಗಳು ಗೊತ್ತಲ್ಲ ನಂಗೆ'' ಎಂದನು. ವೇಣುಮಾಧವನು ''ಆಗಬಹುದು. ಆದರೆ ನೀನು ನನಗೆ ಪೂರ್ತಿ ತೃಪ್ತಿಯಾಗುವಷ್ಟು ಮಟ್ಟಿಗೆ ಹರಿಕಾಂಬೋದಿ ನುಡಿಸುವುದಾದರೆ ಬರ್ತೇನೆ.'' ಎಂದು ಪ್ರತ್ಯುತ್ತರ ಹೇಳಿದನು. ಗುಂಡಯ್ಯನು ''ಆಗಲೋ ವೇಣು. ನೀನಾದರೂ ಕೇಳಿ ಆನಂದಪಟ್ಟುಬಿಡೋ. ಆದರೆ ನಾಳೆ ಬೆಳಿಗ್ಗೆ ನಮ್ಮ ಮನೆ ಬಾಗಿಲಿಗೆ ಜೊಂಬಾಗಳು, ಪುರೋಹಿತರು ಬರುವ ಹಾಗಾಗಿದ್ದರೆ ಔತಣವೂ ಇಲ್ಲ, ಹರಿಕಾಂಬೋದಿ ರಾಗವೂ ಇಲ್ಲ.'' ಎಂದು ಹೇಳಿ ನಕ್ಕನು. ವೇಣುಮಾಧವನು ಅಲ್ಲಿ ನಿಲ್ಲಲಾರದೆ ಜೋಯಿಸರ ಮನೆಗೆ ಹೊರಟುಹೋದನು.

ಅಂದು ಅರಮನೆಯಲ್ಲಿ ಸಂಗೀತ ಗೋಷ್ಠಿಯು ಪ್ರಾರಂಭವಾಗುವುದಕ್ಕಿಂತ ಸ್ವಲ್ಪಕಾಲ ಮುಂಚಿತವಾಗಿ ಬಕ್ಷಿಯವರು ಗುಂಡಯ್ಯನ ಕೈಗೊಂದು ಕಾಗದದ ಚೀಟಿಯನ್ನು ಕೊಟ್ಟು ''ಇದೇ ಅನುಕ್ರಮದಲ್ಲಿ ನುಡಿಸಬೇಕೆಂತ ಅಪ್ಪಣೆಯಾಗಿದೆ. ಗವಾಯಿಗಳು ಸಿತಾರಿನಲ್ಲಿ ಅವರ ಕಡೆಯವುಗಳನ್ನು ನುಡಿಸಬೇಕೆಂತ ಅವರಿಗೂ ಹೀಗೆ ಅಪ್ಪಣೆಯಾಗಿದೆ. ಮೊದಲು ಅವರಿಂದ ಮತ್ತು ಅವರ ಕಡೆಯ ಪಕ್ಕವಾದ್ಯಗಳವರಿಂದ ಪ್ರಾರಂಭ. ಅವರದೊಂದು ನಿಮ್ಮದೊಂದು, ಮತ್ತೆ ಅವರದೊಂದು ನಿಮ್ಮದೊಂದು ಹೀಗೆ ವರಸೆ. ಅವರು ಉತ್ತರ ದೇಶದಲ್ಲಿ ಪ್ರಸಿದ್ಧ ವಿದ್ವಾಂಸರು. ನಮ್ಮ ದೇಶದ ಗೌರವ ಕಾಪಾಡುವ ಭಾರ ನಿಮ್ಮದು'' ಎಂದರು. ಗುಂಡಯ್ಯನು ತನ್ನ ಸಂತೋಷ ಕೃತಜ್ಞತೆಗಳನ್ನು ಯಥೋಚಿತವಾಗಿ ಸೂಚಿಸಿದನು. ಪಟ್ಟಿಯಲ್ಲಿ ಹರಿಕಾಂಬೋದಿಯ ಹೆಸರೇ ಇಲ್ಲದಿದ್ದುದನ್ನು ಕಂಡು ಖಿನ್ನಮನಸ್ಕನಾಗಿ ಒಂದೆರಡು ನಿಮಿಷಗಳ ಕಾಲ ಚಿತ್ರದ ಗೊಂಬೆಯಂತೆ ಸ್ತಬ್ಧನಾಗಿ ನಿಂತಿದ್ದನು.

ವಾದ್ಯಗಳ ವಾದನವು ಮುಂದುವರಿದಂತೆಲ್ಲ ಗುಂಡಯ್ಯನ ಗೋಟು ವಾದ್ಯದ ಸಂಗೀತವೇ ಮೇಲುಗೈಯಾಯಿತು. ಗವಾಯಿಯ ಮುಖವು ಪೆಚ್ಚಾಗುತ್ತಾ ಬಂದಿತು. ಅವನು ತನ್ನ ಕೀರ್ತಿಗೆ ಲೋಪ ಬಂದಿತೆಂದು

ಸ್ವಲ್ಪ ವಿಷಾದಪಟ್ಟನಾದರೂ ಎದುರಾಳಿಯ ವಿದ್ವತ್ತನ್ನೂ ಸಾಮರ್ಥ್ಯವನ್ನೂ ಮೆಚ್ಚಿ ನಿಷ್ಕಲ್ಮಷ ಮನಸ್ಸಿನಿಂದ ಕೂಡಿ ತಲೆದೂಗುವಷ್ಟು ಗುಣಪಕ್ಷಪಾತವು ಅವನಲ್ಲಿದ್ದಿತು. ಅವನ ದೊಡ್ಡ ಗುಣವನ್ನು ಕಂಡು ಪ್ರಭುಗಳವರಿಗೂ ಸಂತೋಷವಾಯಿತು.

ಬಕ್ಷಿಯವರು ಪ್ರಭುಗಳವರ ಸಮ್ಮುಖದಿಂದ ಗುಂಡಯ್ಯನ ಬಳಿಗೆ ಬಂದು ಅವನ ಕಿವಿಯಲ್ಲಿ "ಹರಿಕಾಂಬೋದಿ ಆಗಬೇಕೆಂತ ಅಪ್ಪಣೆಯಾಗಿದೆ. ನೀವು ನಿಸ್ಸೀಮರಾಗಿರುವ ರಾಗ ಅದು. ಅದು ಕೊನೆಗೆ ಇರಲೆಂದು ಮಹಾಸ್ವಾಮಿಯವರ ಅಭಿಪ್ರಾಯವಾಗಿತ್ತು" ಎಂದು ತಿಳಿಸಿದರು. ಗುಂಡಯ್ಯನಿಗೆ ಆಗ ಉಂಟಾದ ಸಂತೋಷವೆಷ್ಟೆಂಬುದನ್ನು ಅವನೊಬ್ಬನೇ ಅನುಭವದಿಂದ ಕಂಡುಕೊಂಡಿರಬೇಕೇ ಹೊರತು, ಅದು ವರ್ಣನೆಗೆ ಸಾಧ್ಯವಿಲ್ಲ. ಅಭೂತಪೂರ್ವವಾದ ಸಂತೋಷಭರದಿಂದ ಅವನ ಹೃದಯವು ಉಬ್ಬಿಹೋಯಿತು. ಸರಸ್ವತೀದೇವಿಯೇ ಅವನ ಮೇಲೆ ಆವೇಶಗೊಂಡಿದ್ದಳೋ ಎಂದು ತೋರುವಂತೆ ಅವನು ಹರಿಕಾಂಬೋದಿಯನ್ನು ನುಡಿಸಿದನು. ಸಭಿಕರ ಆನಂದಕ್ಕೆ ಪಾರವೇ ಇರಲಿಲ್ಲ. ಗವಾಯಿಯು ತಾನು ಪ್ರಭುಗಳ ಸನ್ನಿಧಿಯಲ್ಲಿದ್ದುದನ್ನೇ ಮರೆತು ಮೂರು ನಾಲ್ಕು ಕಡೆಗಳಲ್ಲಿ "ಹಾ, ಹಾ," ಎಂದನು. ವಿದ್ವತ್ಪಕ್ಷಪಾತಿಗಳಾದ ಪ್ರಭುಗಳು ಪ್ರಸನ್ನವಾದ ಮುಖಮುದ್ರೆಯಿಂದ ಮಂದಹಾಸವನ್ನು ಬೀರುತ್ತಿದ್ದರು. ಅಪರಿಮಿತವಾದ ಉತ್ಸಾಹ ಸಂತೋಷಗಳ ಮಧ್ಯದಲ್ಲಿ ಗುಂಡಯ್ಯನ ಹೃದಯವು "ನಮ್ಮ ವೇಣುವೂ ಇವೊತ್ತಿನ ಹರಿಕಾಂಬೋದಿ ಕೇಳಿದ್ದರೆ" ಎಂದು ಮಿಡಿಯುತ್ತಿದ್ದಿತು ಸಂಗೀತ ಗೋಷ್ಠಿಯು ಮುಗಿದ ಬಳಿಕ ಪ್ರಭುಗಳವರು ಸಂಗೀತ ವಿದ್ವಾಂಸರಿಬ್ಬರಿಗೂ ಯಥೋಚಿತವಾದ ಸಂಭಾವನೆಗಳನ್ನನುಗ್ರಹಿಸಿದರು. ಸಂಭಾವನೆಗಳು ಪ್ರಭುಗಳವರ ಔದಾರ್ಯಕ್ಕೆ ತಕ್ಕ ಹಾಗೆ ಅಮೂಲ್ಯವಾಗಿದ್ದುವು. ಗುಂಡಯ್ಯನಿಗೆ ದೊರೆತ ಸಂಭಾವನೆಯೇ ಹೆಚ್ಚಿನದೆಂಬುದನ್ನು ಹೇಳಬೇಕಾದುದೇ ಇಲ್ಲ.

ಅರಮನೆಯಿಂದ ಹೊರಟ ಬಳಿಕ ಗುಂಡಯ್ಯನು ಗವಾಯಿಗಳೊಡನೆಯೂ, ಆಸ್ಥಾನದ ವಿದ್ವಾಂಸರುಗಳೊಡನೆಯೂ ಮಾತನಾಡಿ ಮುಗಿಸಿ,

ಬಗೆಬಗೆಯ ಹೊಗಳಿಕೆಗಳಿಗೆಲ್ಲ ಕೃತಜ್ಞತೆಯ ಸದುತ್ತರಗಳನ್ನು ಹೇಳಿ ಮನೆಯನ್ನು ಸೇರುವಾಗ್ಗೆ ಬಹಳ ಹೊತ್ತಾಯಿತು. ಅಲ್ಲದೆ, ಮೈಸೂರು ನಗರದಲ್ಲಿ ಮೊಟ್ಟಮೊದಲನೆಯ ದಿನ ನಡೆದಿದ್ದ ಅವನ ಸಂಗೀತವನ್ನು ಕೇಳಿ, ಅವನ ವಿಚಾರವನ್ನು ಪ್ರಭುಗಳವರಲ್ಲಿ ಅರಿಕೆಮಾಡಿದ್ದ ಅರಮನೆ ವಿದ್ವಾಂಸರು ಅವನ ಜೊತೆಯಲ್ಲಿ ಅವನ ಮನೆಗೇ ಬಂದು ಬಹಳ ಹೊತ್ತು ಮಾತನಾಡುತ್ತ ಕುಳಿತುಬಿಟ್ಟರು. ಆದಕಾರಣ, ವೇಣುಮಾಧವನ ಮನೆಗೆ ಹೋಗಿ ತನಗೆ ಸಂಭಾವನೆಯು ದೊರೆತ ಸಂತೋಷವಾರ್ತೆಯನ್ನು ತಿಳಿಸಲು ಅಂದು ರಾತ್ರಿ ಸಾಧ್ಯವಾಗಲಿಲ್ಲ. ಅವನು ಮಾರನೆಯ ದಿನಕ್ಕೆ ಅವರಿಗೂ ಔತಣ ಹೇಳಿದನು. ಅವರು ಗುಂಡಯ್ಯನಿಗೆ ದೊರೆತ ಮೆಚ್ಚುಗಳಿಗಾಗಿ ಸಂತೋಷವನ್ನು ಸೂಚಿಸಿ ಮನೆಗೆ ತೆರಳಿದ ಬಳಿಕ ಗುಂಡಯ್ಯನು "ಬೆಳಗ್ಗೆ ಬಹಳ ಮುಂಚೆ ವೇಣೂ ಮನೆಗೆ ಹೋಗಬೇಕು" ಎಂದುಕೊಂಡನು.

೪

ಬೆಳಗಾದೊಡನೆಯೇ ಗುಂಡಯ್ಯನು ಮುಖವನ್ನು ತೊಳೆದುಕೊಂಡು ಸಡಗರದಿಂದ ವೇಣುಮಾಧವನ ಮನೆಗೆ ಹೋದನು. ಅವನ ಮನಸ್ಸು ಮಿತ್ರನೊಡನೆ ಆನಂದವಾರ್ತೆಯನ್ನರುಹಲು ತವಕಪಡುತ್ತಿದ್ದಿತು. ಉತ್ಸಾಹಕ್ಕೆ ತಕ್ಕ ವೇಗದಿಂದ ಅವನು ವೇಣುಮಾಧವನ ಮನೆಗೆ ಹೋದನು. ಮನೆಯ ಬಾಗಿಲಿನಲ್ಲೊಂದು ಗುಂಪು. ಮನೆಯೊಳಗಿನಿಂದ ರೋದನ ಧ್ವನಿ. ಗುಂಡಯ್ಯನು ಆತುರದಿಂದ ವಿಚಾರಿಸುವಲ್ಲಿ ಮುದುಕನೊಬ್ಬನು "ನಂಬಲಾಗದ ನಿಜ ಸ್ವಾಮಿ! ಎಂಥಾ ತ್ಯಾಗ! ಎಂಥಾ ಸಾವು ಸ್ವಾಮಿ! ಅದಕ್ಕೂ ಪುಣ್ಯವಿರಬೇಕು. ನಿನ್ನೆಯೆಲ್ಲಾ ಉಪವಾಸವಂತೆ. ಮೃತ್ಯುಂಜಯ ಜಪ ಯಾರಿಗೋಸ್ಕರವೋ ಮಾಡಿಸಿ ಅವರ ಬದಲು ತಾವು ಸಾಯಬೇಕೆಂದು ಕೊಂಡು ಕಣ್ಣೀರು ಸುರಿಸಿದರಂತೆ. ಪಂಚಾಮೃತ ಅಭಿಷೇಕದ ತೀರ್ಥ ಮಾತ್ರ ಸ್ವೀಕರಿಸಿ ಮಲಗಿದರಂತೆ" ಎಂದನು. ಗುಂಡಯ್ಯನು ಅವನ ಮಾತುಗಳು ಮುಗಿಯುವ ಮೊದಲೇ ಮನೆಯೊಳಕ್ಕೆ ಹೋದನು. ಅವನ

ಕಣ್ಣುಗಳಿಂದ ನೀರು ಹರಿಯುತ್ತಿದ್ದಿತು. ಹೆಣದ ಬಳಿ ಕುಳಿತು ರೋದಿಸುತ್ತಿದ್ದ ವೆಂಕಟಲಕ್ಷ್ಮಮ್ಮನು ಅವನನ್ನು ಕಂಡೊಡನೆಯೇ ಬಿಕ್ಕಳಿಸಿ ಬಿಕ್ಕಳಿಸಿ ಗೋಳಾಡುತ್ತ "ನನ್ನ ಜೀವನದ ತಂತಿ ಮುರಿದುಹೋಯಿತಪ್ಪಾ! ನನ್ನನ್ನು ಬಿಟ್ಟು ಹೊರಟುಹೋದರು. ನಿನ್ನೇ, ನಿನ್ನೇ 'ಗುಂಡನಿಗೆ ಬದಲು ನಾನು ಸಾಯುವಂತೆ ಮಾಡು ನಮ್ಮಪ್ಪ, ಅವನಿದ್ದರೆ ನನ್ನ ಹರಿಕಾಂಬೋದಿ ರಾಗಕ್ಕೆ ನಿತ್ಯಯೌವನ. ನನ್ನ ಆಯುಸ್ಸೆಲ್ಲಾ ಅವನಿಗೇ ಹಾಕು ನಮ್ಮಪ್ಪ' ಎಂದು ಅತ್ತರು. ನಾನು ಸಮಾಧಾನ ಹೇಳಿದೆ. ಊಟ ಮಾಡಲಿಲ್ಲ. ತೀರ್ಥ ತಗೊಂಡು ಮಲಗಿದರು. ಸರಿಹೊತ್ತಿನಲ್ಲಿ 'ಸಂಕಟ ಸಂಕಟ' ಅಂದರು. ಹ್ಯಾಗ್ಹ್ಯಾಗೋ ಆಡಿದರು. ಬಲು ಬೇಗ ಜೀವ ಹಾರಿಹೋಯ್ತು. ನನ್ನೂ ಅವರ ಜೊತೇಲಿ ಸುಟ್ಟುಬಿಡೀ, ಅಪ್ಪಾ" ಎಂದು ಹೇಳಿ ಗೋಳಾಡಿದರು. ಗುಂಡಯ್ಯನು ತನ್ನ ಮಿತ್ರನ ಹೆಣದ ಮೇಲೆ ಗೋಳಾಡುತ್ತ "ವೇಣು, ವೇಣು, ನೀನು ಕೃತಯುಗದವನು, ನನ್ನ ದೊರೆಯೇ. ಅಯ್ಯೋ! ಈ ಪಾಪಿಗಾಗಿ ಪ್ರಾಣವನ್ನೇ ಕೊಟ್ಟೆಯಲ್ಲೋ. ವೇಣು, ವೇಣು, ಒಂದು ಮಾತನಾಡೋ" ಎಂದು ಪ್ರಲಾಪಿಸಿದನು.

# ದೆವ್ವಗಳ ದೇಗುಲ

ಆ ದಿನ ಸುಬ್ಬರಾಯರಿಗೆ ಅಪರಿಮಿತವಾದ ಸಂತೋಷ. ಅವರು ಅಮಲ್ದಾರಿ ಹುದ್ದೆಗೆ ಹೊಸದಾಗಿ ನೇಮಕವಾಗಿ ಬಂದಿದ್ದರು; ಊರಿಗೆ ಬಂದ ಕೂಡಲೆ ಕಡಮೆ ಬಾಡಿಗೆಗೆ ಸೊಗಸಾದ ಮಹಡಿಮನೆಯೇ ದೊರೆಯಿತು; ತಾಲ್ಲೂಕಿನಲ್ಲೆಲ್ಲ ತಾವೇ ದೊಡ್ಡ ಅಧಿಕಾರದಲ್ಲಿದ್ದಂತೆ, ಊರಿನಲ್ಲೆಲ್ಲ ಅದೇ ದೊಡ್ಡ ಮನೆ. ತಾವು ಹೊಸದಾಗಿ ದೊಡ್ಡ ಕೆಲಸಕ್ಕೆ ನೇಮಕವಾಗಿ ಬಂದ ಕೂಡಲೆ ಅಗ್ಗದ ಬಾಡಿಗೆಗೆ ಉತ್ತಮವಾದ ಮನೆಯು ದೊರೆಯಿತೆಂಬುದು ಅವರ ಸಂತೋಷಕ್ಕೆ ಕಾರಣ. ಅಲ್ಲದೆ, ಮುಂದಿನ ಅಭ್ಯುದಯಕ್ಕೆ ಅದೊಂದು ಶುಭ ಸೂಚನೆಯೆಂಬುದು ಅವರ ನಂಬಿಕೆ. ಅದೇ ಮನೆಯೇನಾದರೂ ಬೆಂಗಳೂರಿನಲ್ಲಿದ್ದ ಪಕ್ಷಕ್ಕೆ ತಿಂಗಳಿಗೆ ಇನ್ನೂರು ರೂಪಾಯಿಗಳಿಗಿಂತ ಕಡಮೆ ಬಾಡಿಗೆಗೆ ಆ ಮನೆಯನ್ನು ಪಡೆಯುವುದು ಸಾಧ್ಯವಿರಲಿಲ್ಲ. ಬೆಂಗಳೂರಿನಲ್ಲಿ 'ಗಾಳಿ ಬೆಳಕಿಲ್ಲದ ಗುಬ್ಬಿ ಗೂಡು' ಮನೆಯಲ್ಲಿ ವಾಸ ಮಾಡುತ್ತ ಅವರೂ ಮತ್ತು ಅವರ ಕುಟುಂಬದವರೂ ಬಹಳ ಬೇಸರಗೊಂಡಿದ್ದರು. ಆದಕಾರಣ, ಮಹಡಿಮನೆಯ ವಾಸವು ಪ್ರಾರಂಭವಾದ ಮೂರು ದಿನಗಳಿಂದಲೂ ಅವರೆಲ್ಲರಿಗೂ ಬಡವನಿಗೆ ಸಿಧಿಯು ದೊರೆತಷ್ಟು ಸಂತೋಷ. ಸುಬ್ಬರಾಯರಿಗಂತೂ ಇತರರೆಲ್ಲರಿಗಿಂತಲೂ ಹೆಚ್ಚಿನ ಸಂತೋಷ. ಮೂರು ದಿನಗಳಿಂದಲೂ ವೃದ್ಧಿಯಾಗಿದ್ದ ಅಪರಿಮಿತವಾದ ಸಂತೋಷ.

ಸುಬ್ಬರಾಯರು ಮನೆಯ ಸೊಬಗನ್ನೂ ಸೌಕರ್ಯಗಳನ್ನೂ ನೆನೆದು ಸಂತೋಷಪಡುತ್ತಿರುವಷ್ಟರಲ್ಲಿ ಸ್ಥಳಪುರೋಹಿತರಾದ ನಾರಾಯಣಶಾಸ್ತ್ರಿಗಳವರು "ತಾಲ್ಲೂಕು ದೊರೆಗಳ" ದರ್ಶನಕ್ಕಾಗಿ ಬಂದರು. ಊರಿನವರೆಲ್ಲರೂ ಅವರನ್ನು ದೊಡ್ಡ ಶಾಸ್ತ್ರಿಗಳೆಂದೂ, ಅವರ ತಮ್ಮನನ್ನು ಚಿಕ್ಕ

ಶಾಸ್ತ್ರಿಗಳೆಂದೂ ಕರೆಯುತ್ತಿದ್ದರು. ಸುಬ್ಬರಾಯರು ವಾಸಮಾಡುತ್ತಿದ್ದುದು, ಚಿಕ್ಕಶಾಸ್ತ್ರಿಗಳ ಮನೆಯಲ್ಲಿ. ದೊಡ್ಡ ಶಾಸ್ತ್ರಿಗಳಿಗೆ ಆದರದ ಸ್ವಾಗತವೇ ದೊರೆಯಿತು. ಆ ಬಳಿಕ ಸುಬ್ಬರಾಯರು "ಶಾಸ್ತ್ರಿಗಳೇ, ತಮ್ಮ ದರ್ಶನ ವಾದ ಈ ದಿನವೇ ಸುದಿನ. ನಾನು ತಮ್ಮ ಪಾಂಡಿತ್ಯದ ಖ್ಯಾತಿಯನ್ನು ಕೇಳಿದ್ದೆ. ನಾನೇ ಬಂದು ತಮ್ಮ ದರ್ಶನ ಪಡೆಯಬೇಕೆಂದೂ ಯೋಚಿಸಿದ್ದೆ, ಅಷ್ಟರಲ್ಲಿ ತಾವೇ ದಯಮಾಡಿದಿರಿ" ಎಂದರು.

"ತಾವು ಎಷ್ಟಾದರೂ ತಾಲ್ಲೂಕು ದೊರೆಗಳು. ತಮ್ಮ ದರ್ಶನಕ್ಕೆ ನಾವೆಲ್ಲ ಬರಬೇಕಾದುದೇ ಧರ್ಮ. ತಮ್ಮ ವಿನಯ ದೊಡ್ಡದು. ಈ ಚಿಕ್ಕ ವಯಸ್ಸಿನಲ್ಲಿ ಇಷ್ಟು ದೊಡ್ಡ ಅಧಿಕಾರದಲ್ಲಿದ್ದೂ ಅಹಂಕಾರವಿಲ್ಲದಿರುವುದು ಪೂರ್ವ ಪುಣ್ಯ. ತಾವು ಬರುವುದೆಂದರೇನು ? ಪುರೋಹಿತನಾದ ನಾನು ಬರಬೇಕಾದ್ದೇ ಧರ್ಮ ಇದರ ಮೇಲೋ ತಾವು ನಮ್ಮ ಜನವೆಂತ ಕೇಳಿದ ಮೇಲಂತೂ, ಎಷ್ಟು ಹೊತ್ತಿಗೆ ತಮ್ಮನ್ನು ಕಂಡೇನೋ – ಅಂತ ಕುತೂಹಲ. ಆದರೂ ತಾವು ದೂರದ ಬೆಂಗಳೂರಿನಿಂದ ಬಂದ ಆಯಾಸ ಸ್ವಲ್ಪ ಕಡಮೆ ಯಾಗಲಿ, ಆಮೇಲೆ ಹೋಗೋಣ ಅಂತ ಮೂರು ದಿನಗಳಿಂದ ಅದನ್ನು ತಡೆದುಕೊಂಡಿದ್ದೆ."

"ಅದೆಲ್ಲಾ ತಮ್ಮ ವಿಶ್ವಾಸ. ಶಾಸ್ತ್ರಿಗಳೇ, ನಿಜವಾಗಿ ನಾನೇ ಬರ ಬೇಕೆಂದಿದ್ದೆ. ನಾನಿರುವುದು ತಮ್ಮ ತಮ್ಮಂದಿರ ಮನೆಯಲ್ಲಿ, ನೋಡಿ, ನಾನು ಬರಬೇಕೆಂದಿದ್ದುದಕ್ಕೆ ಅದೂ ಒಂದು ಕಾರಣವೆಂದಾದರೂ ಇಟ್ಟು ಕೊಳ್ಳಿ. ಕಿರಿಯರು ಹಿರಿಯರ ಬಳಿಗೆ ಬಂದು ನೋಡಬೇಕಾದದ್ದೇ ನ್ಯಾಯ. ಅಧಿಕಾರ ಎರಡು ದಿನದ್ದು."

"ಇದೇ ವಿನಯವೇ ಶಾಶ್ವತವಾಗಿರಲಿ. ಅಂತೂ ಈ ಮನೆಗೇ ಬಂದು ಬಿಟ್ಟಿರಿ."

"ಅದೇಕೆ, ಶಾಸ್ತ್ರಿಗಳೇ ಹಾಗಂತೀರಿ ? ಮನೆ ಸೊಗಸಾಗಿದೆ. ಮೇಲಾಗಿ ನಮ್ಮವರ ಮನೆ."

"ಇರಬಹುದು, ಸ್ವಾಮಿ ಅದೇನೋ ಸರಿ. ಆದರೂ, ಆದರೂ."

"ಸಂದೇಹವೇಕೆ, ಹೇಳಿಬಿಡಿ. ನನ್ನೊಡನೆ ಸಂಕೋಚವೆ? ಇನ್ನೂ ಕೊಂಚ ಬಾಡಿಗೆ ಬೇಕೆಂತ ಚಿಕ್ಕ ಶಾಸ್ತ್ರಿಗಳೇನಾದರೂ ಹೇಳಿದರೇನು? ಹೇಳಿದ್ದರೆ ಬಾಡಿಗೆ ಹಣ ಹೆಚ್ಚಿಸೋಣಂತೆ. ಹಣ ನಮ್ಮವರ ಕೈಗೆ ತಾನೆ ಹೋಗುತ್ತೆ."

"ಉಂಟೆ, ಉಂಟೆ? ಈಗಿನ ಬಾಡಿಗೆಯೇ ತಲೆಭಾರ. ಇನ್ನೂ ಹೆಚ್ಚಿಸಿದರೆ ದೇವರೇ ಗತಿ. ನನ್ನ ತಮ್ಮ ಹಾಗೇನೂ ಹೇಳಲೂ ಇಲ್ಲ."

"ಹಾಗಾದರೆ, ತಮ್ಮ ಅಭಿಪ್ರಾಯವೇನು? ಮನೆ ಚನ್ನಾಗಿದೆ; ಮೇಲಾಗಿ ನಮ್ಮವರ ಮನೆ ಅಂತ ನಾನೂ ನಮ್ಮ ಮನೆಯವರೂ ಹಿಗ್ಗು ತ್ತಿದ್ದೇವೆ."

"ಮನೆ ಚೆನ್ನಾಗಿರಬಹುದು. ಮನೆ ತಮ್ಮವರದೇ ಆಗಿರಬಹುದು, ಆದರೂ ಚಿನ್ನದ ಸೂಜಿಯೆಂತ ಕಣ್ಣು ಚುಚ್ಚಿಸಿಕೊಳ್ಳಲಾದೀತೆ?"

"ಏಕೆ, ತಳಹದಿ ಭದ್ರವಾಗಿಲ್ಲವೆ? ಇನ್ನೇನಾದರೂ ನ್ಯೂನತೆಯೆ? ಮನೆಯ ಸಂಬಂಧದಲ್ಲಿ ಕೋರ್ಟು ವ್ಯವಹಾರವೇನಾದರೂ ಉಂಟೆ? ನೆರೆ ಹೊರೆ ಚೆನ್ನಾಗಿಲ್ಲವೆ?"

"ಅದೊಂದೂ ಇಲ್ಲ. ಅದೆಲ್ಲಾ ಸರಿಯಾಗಿಯೇ ಇದೆ."

"ಅಲ್ಲಿಗೆ, ನಾನು ಮೊದಲೇ ಹೇಳಿದಂತೆ ಮನೆ ಚೆನ್ನಾಗಿದೆಯೆಂದೇ ನಿರ್ಧರವಾಯಿತಲ್ಲಾ – ಶಾಸ್ತ್ರಿಗಳೆ!"

"ಅದನ್ನೇನೂ ನಾನು ಇಲ್ಲವೆನ್ನಲಿಲ್ಲವಲ್ಲಾ! ಹೇಗೂ ಮನೆ ಚೆನ್ನಾ ಗಿದೆಯೆಂತ ಮನೆಯವರೂ ತಾವೂ ಒಪ್ಪಿಕೊಂಡೇ ಇದ್ದೀರಿ. ಸುಖವಾಗಿದ್ದು ಬಿಡಿ."

"ಏನೋ ಹೇಳಬೇಕೆಂದು ಹೊರಟು, ಈಗ ಹೀಗೆ ತೇಲಿಸಿ ಮಾತ ನಾಡುತ್ತಿದ್ದೀರಿ, ಶಾಸ್ತ್ರಿಗಳೆ! ನಾನೆಷ್ಟಾದರೂ ಹೊರಗಿನಿಂದ ಬಂದವನು; ಇಲ್ಲಿಗೆ ಹೊಸಬ. ಸ್ಥಳಪರಿಚಯ ಸಾಲದು. ಇನ್ನು ಮೇಲೆ ತಾವೇ ನಮ್ಮ ಪುರೋಹಿತರು. ನಮ್ಮ ಯೋಗಕ್ಷೇಮ ತಮ್ಮದು. ಸ್ಪಷ್ಟವಾಗಿ ಏನಿದ್ದರೂ ತಿಳಿಸಿಬಿಡಿ, ಶಾಸ್ತ್ರಿಗಳೆ!"

"ತಾವು ಮಾತಿನಲ್ಲಿ ಬಹು ಚತುರರು ಸ್ವಾಮಿ, ಬಹು ಚತುರರು. ನನ್ನನ್ನೇ ಇಕ್ಕಳದಲ್ಲಿ ಸಿಕ್ಕಿಸಿಬಿಟ್ಟಿದ್ದೀರಿ. ನನ್ನ ಗತಿ 'ಇರಿದೇನೆ ಹೊಟ್ಟೆ, ತಿವಿದೇನೆ ಕಣ್ಣು' ಎಂದಂತಾಗಿದೆ. ನಿಜಸ್ಥಿತಿ ತಿಳಿಸಿದರೆ, ತಮ್ಮನಿಗೆ–ಬೆನ್ನು ಬಿದ್ದ ತಮ್ಮನಿಗೆ–ನಷ್ಟ ಮಾಡಿದ ಪಾಪ. ನಿಜಸ್ಥಿತಿ ತಿಳಿಸದೆ ಸುಮ್ಮನಿದ್ದರೆ, ತಮಗೆ–ಸ್ಥಳ ವಿದ್ಯಮಾನ ತಿಳಿಯದ ಹೊಸಬರಿಗೆ–ಅನ್ಯಾಯಮಾಡಿದ ಪಾಪ. ಏನು ಮಾಡಲಿ ಹೇಳಿ, ಈ ಧರ್ಮಸಂಕಟಕ್ಕೆ?"

"ಎರಡನೇ ಪಾಪವೇ ಹೆಚ್ಚು ತಾನೇ? ಹೇಗೂ ಮೊದಲನೆಯ ಪಾಪ ಅದಕ್ಕಿಂತ ಕಡಮೆ. ತಿಳಿಸಿಬಿಡಿ. ಶಾಸ್ತ್ರಿಗಳೆ! ನಿಜಸ್ಥಿತಿ ತಿಳಿಸಿ ಬಿಡಿ."

"ಇನ್ನು ಯತ್ನವಿಲ್ಲ. ವಿಷಯ ಮಾತ್ರ ತಮ್ಮಲ್ಲೇ ಗೋಪ್ಯವಾಗಿರ ಬೇಕು. ನೋಡಿ, ಈ ಮನೆ, ದೆವ್ವಗಳ ದೇಗುಲ, ಸ್ವಾಮಿ, **ದೆವ್ವಗಳ ದೇಗುಲ.**"

"ಇಷ್ಟೇ ತಾನೆ? ಈಗಿನ ಕಾಲದಲ್ಲಿ ದೆವ್ವಗಳೆಂದರೆ ಯಾರಿಗೂ ನಂಬಿಕೆಯಿಲ್ಲ. ಶಾಸ್ತ್ರಿಗಳೆ, ನನಗಂತೂ ಸುತರಾಂ ನಂಬಿಕೆಯಿಲ್ಲ. ದೆವ್ವ ಗಳನ್ನು ಯಾರುತಾನೇ ನೋಡಿದ್ದಾರೆ? ನಾನಂತೂ ನೋಡಿಲ್ಲ. ದೆವ್ವಗಳಿಲ್ಲ ವೆಂದೇ ನನ್ನ ನಂಬಿಕೆ."

"ತಾವು ಭಗವಂತನನ್ನು ನೋಡಿದ್ದೀರಾ? ನೋಡಿಲ್ಲ. ಹೀಗಿದ್ದೂ ನಿನ್ನೆ ತಾನೆ ರಾಮಕೃಷ್ಣಪರಮಹಂಸರ ಮೇಲೆ ಭಾಷಣ ನಡೆದಾಗ್ಗೆ ತಾವು ಸಭಾಧ್ಯಕ್ಷತೆ ವಹಿಸಿದ್ದಿರಂತೆ, ಭಗವಂತನನ್ನು ಕೊಂಡಾಡಿದಿರಂತೆ; ಭಗವಂತ ನನ್ನು ಕಂಡ ಮಹಾಪುರುಷರೆಂದು ಪರಮಹಂಸರನ್ನು ಕೊಂಡಾಡಿದಿರಂತೆ. ನನ್ನ ಮಾತಿಗೆ ಕೋಪ ಮಾಡಿಕೊಳ್ಳಬೇಡಿ. ತಾವು ದೇವರನ್ನೂ ನೋಡಿಲ್ಲ. ದೇವರನ್ನು ನೋಡಿದ್ದ ರಾಮಕೃಷ್ಣಪರಮಹಂಸರನ್ನೂ ನೋಡಲಿಲ್ಲ; ದೇವರನ್ನು ನಾನಂತೂ ನೋಡಿಲ್ಲ. ದೇವರಿಲ್ಲವೆಂದೇ ನನ್ನ ನಂಬಿಕೆ ಎಂದು ನಿನ್ನೆ ತಾವೇಕೆ ಹೇಳಲಿಲ್ಲ?"

"ಹಾಗೆ ಹೇಳಲಾದೀತೆ? ಎಷ್ಟೆಷ್ಟು ದೊಡ್ಡವರು ಪರಮಹಂಸರ ವಿಚಾರವಾಗಿ ಹೇಳಿದ್ದಾರೆ, ಎಷ್ಟೆಷ್ಟು ಸತ್ಯಸಂಧರು ಪರಮಹಂಸರನ್ನು

ನೋಡಿ ಅವರ ಚರಿತ್ರೆಯನ್ನು ಬರೆದಿದ್ದಾರೆ, ಏನು ಕಥೆ! ಅದನ್ನೆಲ್ಲಾ ನಂಬದಿರುವ ಬಗೆ ಹೇಗೆ?''

''ಸಣ್ಣವರು ಸುಳ್ಳು ಹೇಳುತ್ತಾರೆ. ದೊಡ್ಡವರು ಸತ್ಯಸಂಧರು; ಅವರು ಮಾತ್ರ ನಿಜ ಹೇಳುತ್ತಾರೆ—ಅಲ್ಲವೆ?''

''ಸಣ್ಣವರು ಸುಳ್ಳು ಹೇಳುತ್ತಾರೆಂತ ನಾನೆಲ್ಲಿ ಹೇಳಿದೆ? ಪರಮಹಂಸರನ್ನು ಕಂಡಿದ್ದ ಮಹನೀಯರು ಅನೇಕ ಮಂದಿ ಅವರ ವಿಷಯವನ್ನೂ ಅವರು ಭಗವಂತನನ್ನು ಪ್ರತ್ಯಕ್ಷ ಮಾಡಿಕೊಂಡ ವಿಷಯವನ್ನೂ ಬರೆದಿಟ್ಟಿದ್ದಾರೆ. ಅವರ ಮಾತುಗಳನ್ನು ನಂಬಬೇಕು—, ಎಂಬುದು ನನ್ನ ಅಭಿಪ್ರಾಯ. ಅದನ್ನು ನಾನು ಹೇಳಿದೆ; ಅಷ್ಟೆ.''

"ಎಂದರೇನಾಯಿತು? ತಾವು ದೇವರನ್ನು ನೋಡಿಲ್ಲದಿದ್ದರೂ, ದೇವರನ್ನು ಪ್ರತ್ಯಕ್ಷ ಮಾಡಿಕೊಂಡ ಪರಮಹಂಸರನ್ನು ನೋಡಿದವರ ಗ್ರಂಥಗಳನ್ನು ಓದಿ ದೇವರಿದ್ದಾನೆಂದು ನಂಬಬೇಕಾಯಿತು—ಎಂತ ತಾನೆ ತಮ್ಮ ಅಭಿಪ್ರಾಯ?"

"ಹೌದು, ಶಾಸ್ತ್ರಿಗಳೇ; ಅದೇ ನನ್ನ ಅಭಿಪ್ರಾಯ."

"ದೊಡ್ಡ ಮಾತಿನಲ್ಲಿ ಹೇಳುವುದಾದರೆ ಇದನ್ನೇ ಆಪ್ತವಾಕ್ಯ ಪ್ರಮಾಣವೆಂತ ನಮ್ಮವರು ಹೇಳಿರುವುದು. ದೆವ್ವಗಳನ್ನು ಕಂಡವರೂ, ದೆವ್ವಗಳಿಂದ ಕೋಟಲೆ ಪಟ್ಟವರೂ ಕೋಟಲೆ ಪಡುತ್ತಿರುವವರೂ, ಹೇಳುವುದನ್ನೂ ಅದೇ ರೀತಿ ನಂಬಬೇಕಲ್ಲವೆ?"

"ಶಾಸ್ತ್ರಿಗಳೆ, ನಾನು ಒಂದು ಮಾತು ಹೇಳಿದರೆ ಅಸಮಾಧಾನ ಮಾಡಿಕೊಳ್ಳಬೇಡಿ. ಭೂತಚೇಷ್ಟೆ, ದೆವ್ವದ ಕೋಟಲೆ—ಇದೆಲ್ಲಾ ನರಗಳ ದೌರ್ಬಲ್ಯದ ಪರಿಣಾಮವೆಂದು ಶಾಸ್ತ್ರಜ್ಞರು ನಿರ್ಧರಿಸಿದ್ದಾರೆ."

"ಹೂಣ ಶಾಸ್ತ್ರಜ್ಞರು ತಾನೆ? ಒಂದು ಸಂಗತಿ ಕೇಳಿ. ಅವರಿಗೇ ಅದನ್ನು ತಿಳಿಸಿ. ಅವರು ಏನು ಹೇಳುತ್ತಾರೋ ಅದನ್ನಾದರೂ ನನಗೆ ತಿಳಿಸಿ. ಒಬ್ಬ ಅಯ್ಯಂಗಾರಿ ಹುಡುಗ. ಒಂದು ಪಟ್ಟಣಕ್ಕೆ ನಾಲ್ಕೈದು ಮೈಲಿಗಳ ದೂರದ ಹಳ್ಳಿಯವನು. ಅವನು ರಾತ್ರಿ ಸರಿಹೊತ್ತಿನಲ್ಲಿ ರೈಲಿನಿಂದ ಬಂದ. ಆಗಲೇ ತನ್ನ ಹಳ್ಳಿಗೆ ಹೊರಟ. ಆ ಹಳ್ಳಿಯ ಕೆರೆ ಏರಿಯ

ಈಚೆಗಿರುವ ವಾಲೆತೋಪಿನ ಹತ್ತಿರಕ್ಕೆ ಹೋಗುವ ವೇಳೆಗೆ ಗಿರ್ಕಿ ಚಡಾವಿನ ಸದ್ದು ಕೇಳಿದ ಹಾಗಾಯಿತು. 'ಯಾರು?' ಎಂದ. ಉತ್ತರವಿಲ್ಲ ಮತ್ತೆ ಮುಂದೆ ಹೊರಟ; ಮತ್ತೆ ಗಿರ್ಕಿ ಚಡಾವಿನ ಸದ್ದು. ಹುಡುಗ ಒಂಟಿಯಾಗಿದ್ದ. ಭಯಕ್ಕೆ ಬೆವತುಹೋದ. ಊರಿಗೆ ಓಡಿಹೋದ. ಅವನಿಗೆ ಮೈಮೇಲೆ ಪ್ರಜ್ಞೆಯೇ ಇರಲಿಲ್ಲ. ಒಂದು ಮುಸಲ್ಮಾನ ಪಿಶಾಚಿ ಮೆಟ್ಟಿಕೊಂಡು ಅವಾಂತರ ಮಾಡಿತು.

"ಪಿಶಾಚಿಗಳಲ್ಲಿ ಕೋಮುವಾರು ಪಿಶಾಚಿಗಳು ಬೇರೆಯೇ? ಅದು ಮುಸಲ್ಮಾನ ಪಿಶಾಚಿಯೆಂದು ಹೇಳುವುದು ಹೇಗೆ? ನರಗಳ ದೌರ್ಬಲ್ಯದಿಂದಲೂ, ಚಡಾವಿನ ಸದ್ದು ಕೇಳಿದಂತೆ ಕಲ್ಪನೆ ಮಾಡಿಕೊಂಡದ್ದರಿಂದಲೂ, ಭಯದಿಂದಲೂ ಕೆಲವು ವಿಕಾರಗಳು ಕಂಡುಬಂದಿರಬಹುದು. ಅವುಗಳನ್ನೇ ಜನರು ಭೂತಚೇಷ್ಟೆಯೆಂದು ಭಾವಿಸಿಕೊಂಡಿರಬಹುದು."

"ನನ್ನ ಮಾತುಗಳನ್ನು ಪೂರ್ತಿಯಾಗಿ ಕೇಳಬೇಕು. ಆ ಬಳಿಕ ತಾವು ಹೇಗೆ ಬೇಕಾದರೂ ಭಾವಿಸಬಹುದು. ಪಿಶಾಚಿಗಳದೇ ಒಂದು ಪ್ರಪಂಚ. ಇಂಗ್ಲಿಷ್ ಓದಿದವರು ನಮ್ಮನ್ನು ಮಾತ್ರ ಮೂಢ ನಂಬಿಕೆಯುಳ್ಳವರೆಂದು ತೆಗಳುತ್ತೀರಿ. ಟೋಪಿಯವರು ಹೇಳಿದುದೆಲ್ಲ ವೇದವಾಕ್ಯವೆಂದು ಭಾವಿಸುವುದೂ ಮೂಢ ನಂಬಿಕೆಯ ಒಂದು ಜಾತಿಯೇ ತಾನೆ? ಅದು, ತನಗೆ ತನ್ನ ಅರಿವೇ ಇಲ್ಲದ ಜಾತಿ. ತಾವು ನರಗಳ ದೌರ್ಬಲ್ಯ ನರಗಳ ದೌರ್ಬಲ್ಯ – ಅಂತೀರಿ. ನಾನು ಹೇಳಿದ ಹುಡುಗ ಮಾರನೆಯ ದಿನದಿಂದ ಖುರಾನ್ ವಾಕ್ಯಗಳನ್ನು ಉದಾಹರಿಸತೊಡಗಿದ. ಉರ್ದು ಭಾಷೆಯಲ್ಲಿ ಮಾತನಾಡತೊಡಗಿದ. ಅವನು ಅಯ್ಯಂಗಾರಿ. ಅವನಿಗೆ ಉರ್ದು ಭಾಷೆಯ ಅಕ್ಷರಗಳಿಗೆ ಒಳತಲೆಯೋ ಹೊರತಲೆಯೋ ಗೊತ್ತಿರಲಿಲ್ಲ. ಹಾಗಿದ್ದೂ ಮೌಲ್ವಿಗಳು ಕೂಡ ಒಪ್ಪುವಂತೆ ಉರ್ದು ಭಾಷೆಯಲ್ಲಿ ಲೀಲಾಜಾಲವಾಗಿ ಮಾತನಾಡುವುದಕ್ಕೆ ಪ್ರಾರಂಭಿಸಿದ. ಇದೂ ನರಗಳ ದೌರ್ಬಲ್ಯವೆ?"

"ಇದು ನಿಜವೆ, ಶಾಸ್ತ್ರಿಗಳೆ? ಇದನ್ನು ನೋಡಿದವರಿದ್ದಾರೆಯೆ?"

"ನಾನೇಕೆ ಸುಳ್ಳು ಹೇಳಲಿ, ಸ್ವಾಮಿ? ಅದನ್ನು ಕಂಡವರು ಬೇಕಾದಷ್ಟು ಮಂದಿಗಳಿದ್ದಾರೆ. ಅವನ ತಾಯಿತಂದೆಗಳೇ ಇದ್ದಾರೆ. ತಾವು ರಜಾ ಪಡೆದು ಆ ಊರಿಗೆ ಹೊರಡುವುದಾದರೆ, ದೂರ ಪ್ರಯಾಣಕ್ಕೆ ಸಿದ್ಧವಾಗುವುದಾದರೆ, ನಾಳೆಯೇ ಬೇಕಾದರೂ ಅಲ್ಲಿಗೆ ಹೋಗೋಣ. ನಾನು ಅವರನ್ನು ಬಲ್ಲೆ. ಆವರ ಬಾಯಿಂದಲೇ ಅವರ ಮಗನ ವಿಚಾರಗಳನ್ನು ಕೇಳಬಹುದು. ಅವರ ಬಂಧುಗಳಿಂದಲೂ, ಅವರ ಊರಿನವರಿಂದಲೂ ಆ ಹುಡುಗನ ವಿಚಾರಗಳನ್ನು ಕೇಳಬಹುದು."

"ನಾನು ಈಗತಾನೇ ಈ ಊರಿಗೆ ಬಂದಿದ್ದೇನೆ. ರಜವನ್ನು ಕೇಳುವುದು ಸಾಧ್ಯವಿಲ್ಲ. ಮತ್ತಾವಾಗಲಾದರೂ ಹೋಗೋಣ. ತಾವು ಹೇಳಿದ ಸಂಗತಿಗಳನ್ನು ನಂಬುವುದೇ ಕಷ್ಟವಾಗಿದೆ."

"ಅಲ್ಲಿಗೆ ತಮಗೆ ಬಿಡುವಾದಾಗ ಹೋಗೋಣ. ಆ ಮುಸಲ್ಮಾನ ಪಿಶಾಚಿ ಮೈಮೇಲೆ ಬಂದಾಗ ಆ ಹುಡುಗ ಉರ್ದು ಭಾಷೆಯಲ್ಲಿ ಮಾತನಾಡುವುದೇನು, ಖುರಾನಿನ ವಾಕ್ಯಗಳನ್ನು ಉದಾಹರಿಸುವುದೇನು, ಕೇಳಿದವರಿಗೆ ಹಸಿಯ ಗೋಡೆಯ ಮೇಲೆ ಹರಳಿಟ್ಟಂತೆ ಭವಿಷ್ಯ ಹೇಳುವುದೇನು, ಇದೆಲ್ಲಾ ನಡೆಯುವುದು. ಅದನ್ನು ಕಂಡು ಆ ಗ್ರಾಮದವರೂ, ಆ ಅಚ್ಚರಿಯನ್ನು ನೋಡಲು ಅಲ್ಲಿಗೆ ನಾನಾ ಸ್ಥಳಗಳಿಂದ ಹೋದವರೂ ಬೆರಗಾಗಿ ಹೋದರು. ಅವರಲ್ಲಿ ನಾನೂ ಒಬ್ಬ."

"ಎಷ್ಟು ಆಶ್ಚರ್ಯ, ಶಾಸ್ತ್ರಿಗಳೇ! ಇದನ್ನು ನಂಬಲೂ ಆರೆ, ನಂಬದಿರಲೂ ಆರೆ. ನನ್ನ ಮನಸ್ಸು ಭತ್ತ ಮೊಸರು ಕಲಸಿದಂತಾಗಿದೆ."

"ನಂಬಿ, ನಂಬಿ, ಸ್ವಾಮಿ. ಸಂಸಾರವಂದಿಗರು, ಇದನ್ನು ನಂಬಿ; ಆದಷ್ಟು ಬೇಗ ಈ ಮನೆಯನ್ನು ಬಿಟ್ಟು ಬೇರೆ ಮನೆಗೆ ಹೋಗಿ ಸುಖವಾಗಿ ಬಾಳಿ. ಈ ಮನೆ ದೆವ್ವಗಳ ದೇಗುಲ. ಇಲ್ಲಿ ಭೂತಚೇಷ್ಟೆ ವಿಪರೀತ ಹೆಚ್ಚು."

"ನಾನು 'ದೆವ್ವಗಳೆಂದರೆ ನಾವೇ. ನಮಗಿಂತ ಬೇರೆ ದೆವ್ವಗಳೆಲ್ಲಿಂದ ಬರಬೇಕು, ನಾವೇ ದೆವ್ವಗಳು' ಎಂತ ಹೇಳಿ ಅನೇಕರನ್ನು ಬಾಯಿ ಬಡಿಯುತ್ತಿದ್ದೆ. ಈಗ ತಮ್ಮ ಮಾತು ಕೇಳಿ...."

"ದೆವ್ವಗಳಲ್ಲಿ ನಂಬಿಕೆ ಬಂತೂ ಅನ್ನಿ. ಹಾಗೆ ದಾರಿಗೆ ಬನ್ನಿ."

"ಏಕೋ ಪೂರ್ತಿಯಾಗಿ ನಂಬುವುದು ಕಷ್ಟವಾಗಿದೆ. ತಮ್ಮ ಮಾತಿನಲ್ಲಿ ಅಪನಂಬಿಕೆ ಪಡುವುದೂ ಕಷ್ಟವಾಗಿದೆ. ಆ ಅಯ್ಯಂಗಾರಿ ಹುಡುಗನ ಗತಿ ಏನಾಯಿತು?"

"ಅಯ್ಯೋ, ಅದೊಂದು ಕರ್ಮಕಥೆ. ಎಂಥ ಪಟುವಾದ ಹುಡುಗ ಎಷ್ಟು ಮಂಕು ಬಿದ್ದುಹೋದ ಅಂತೀರಿ! ಸರ್ವದಾ ಉಸಿರಾಡುವ ತೊಲೆಯ ಹಾಗೆ ಬಿದ್ದಿರುತ್ತಿದ್ದ. ಜೀರ್ಣಶಕ್ತಿಯಂತೂ ಉಡುಗಿಯೇ ಹೋಯಿತು. ತೋಳನಂತಿದ್ದ ಹುಡುಗ ಕದರು ಕಡ್ಡಿಯಾದ. ಪಿಶಾಚಿ ಮೈಮೇಲೆ ಬಂದಾಗ ಮಾತ್ರವೇ ಅವನ ಪ್ರತಾಪ. ಪಾಪ! ಪಾಪ! ಪಿಶಾಚಿಯ ಕೈಗೆ ಸಿಕ್ಕಿ ಆ ಹುಡುಗ ಹೀರಿ ಹಿಪ್ಪೆಯಾಗಿ ಹೋದ."

"ಮಂತ್ರ ತಂತ್ರಗಳೇನೂ ನಡೆಯಲಿಲ್ಲವೆ?"

"ಮಂತ್ರಗಳೆಲ್ಲಾ ಬೇಕಾದಷ್ಟು ನಡೆದುವು, ಭೂತಚಿಕಿತ್ಸೆ ಯಥೇಷ್ಟವಾಗಿ ನಡೆಯಿತು; ಆದರೂ ಫಲವಾಗಲಿಲ್ಲ. ಪಿಶಾಚಿ ಹೇಳಿತಂತೆ, 'ತುರುಕ ಪಿಶಾಚಿಯಾಗಲಿ ಅಥವಾ ಬೊಮ್ಮನ್ ಪಿಶಾಚಿಯಾಗಲಿ, ಮೆಟ್ಟಿಕೊಂಡರೆ ಬಿಡಿಸುವ ಧೀರನೇ ಇಲ್ಲ' ಎಂತ. ಮಂತ್ರಗಳಿಂದ ಫಲವಾಗಲಿಲ್ಲ. ಇನ್ನು ತಂತ್ರದ ಮಾತು ಕೇಳಿ. ಹುಡುಗನ ತಂದೆಯೂ ಮಂತ್ರವಾದಿಯೂ ತೋಟಕ್ಕೆ ಹೋಗಿದ್ದಾಗ, ಮಂತ್ರವಾದಿ ಹೇಳಿದನಂತೆ, 'ಸ್ವಾಮಿ, ಹಂದಿಯ ಮಾಂಸವೆಂದರೆ ಮುಸಲ್ಮಾನರು ಹಾರಿ ಬೀಳ್ತಾರೆ. ನೀವು ಒಪ್ಪಿದರೆ, ಹಂದಿ ಮಾಂಸ ತರಿಸಿ ಹುಡುಗನ ಬಾಯಿಗೆ ಹಾಕಿಸಿಬಿಡೋಣ. ಅದರಿಂದ ತುರುಕ ಪಿಶಾಚಿ ಓಡಿಹೋಗಬಹುದು' ಎಂತ. ತಂದೆ ಅದಕ್ಕೊಪ್ಪಲಿಲ್ಲವಂತೆ. ಅವರಿಬ್ಬರಿಗೂ ನಡೆದ ಮಾತುಗಳನ್ನಂತೂ, ಮತ್ತಾರೂ ಕೇಳಿರಲಿಲ್ಲ. ಅವರೂ ತೋಟದಿಂದ ನೇರವಾಗಿ ಮನೆಗೆ ಬಂದರಂತೆ. ಆ ವೇಳೆಗೆ ಆ ಪಿಶಾಚಿ ಆ ಹುಡುಗನ ಮೈದುಂಬಿ, ಅವರಿಬ್ಬರೂ ಮಾತನಾಡಿಕೊಂಡದ್ದನ್ನ ಹೇಳಿ ಮಾಕರಿಸಿತಂತೆ. ಅಲ್ಲದೆ, ಹಂದಿ ಮಾಂಸವನ್ನೇನಾದರೂ ಹುಡುಗನ ಬಾಯಿಗೆ ಹಾಕಿಸಿದರೆ, ತಾನು ಸ್ವಲ್ಪಕಾಲ ಅವನ ಮೈಬಿಟ್ಟು ಹೋಗುವುದಾಗಿಯೂ, ಮಾಂಸದಿಂದ ಅಶುಚಿಯಾಗುವವನು ಹುಡುಗನೇ ಹೊರತು

ತಾನಲ್ಲವೆಂದೂ ತಿಳಿಸಿತಂತೆ. ಅದನ್ನ ಕೇಳಿ ಅವರಿಬ್ಬರೂ ಬೆಕ್ಕಸಬೆರಗಾದರಂತೆ. ಗುಟ್ಟಾಗಿ ತಾವಿಬ್ಬರೇ ಮಾತನಾಡಿಕೊಂಡ ಮಾತುಗಳನ್ನೆಲ್ಲಾ ಕೇಳಿ ಅವರಿಗುಂಟಾದ ಆಶ್ಚರ್ಯಕ್ಕೆ ಮಿತಿಯೇ ಇರಲಿಲ್ಲವಂತೆ.''

''ಕೊನೆಗೆ ಏನಾಯಿತು, ಶಾಸ್ತ್ರಿಗಳೇ? ಹುಡುಗ ಬದುಕಿದ್ದಾನೆಯೇ?''

''ಹುಡುಗ ದಿನದಿನವೂ ಕೃಶವಾದ. ಕೊನೆಗೆ ಸತ್ತೇಹೋದ. ಕಡೆಗೂ ಪಿಶಾಚಿ ಅವನನ್ನು ಮುರಿದುಕೊಂಡೇ ಹೋಯಿತು. ಅವರವರ ಪ್ರಾರಬ್ಧ ಕರ್ಮ. ಅದೆಲ್ಲಾ ಹೋಗಲಿ. ಈ ಮನೆ ಕಟ್ಟಿರುವುದು ದೆವ್ವಗಳ ಬೀಡಾಗಿದ್ದ ಬಯಲಿನಲ್ಲಿ, ಅದರಿಂದ ಈ ಮನೆ ದೆವ್ವಗಳ ದೇಗುಲ. ಇಲ್ಲಿ ಮನೆಯನ್ನೇ ಕಟ್ಟಿಸಕೂಡದೆಂತ ನನ್ನ ತಮ್ಮನಿಗೆ ಎಷ್ಟೋ ಹೇಳಿದೆ. ಅವನು ಕೇಳಲಿಲ್ಲ. ತಾವು ಆದಷ್ಟು ಬೇಗ ಈ ಮನೆಯನ್ನು ಬಿಟ್ಟುಬಿಡಿ.''

೨

''ಶಾಸ್ತ್ರಿಗಳ ಮಾತನ್ನು ಕೇಳಿ ಸುಬ್ಬರಾಯರ ಮನಸ್ಸು ಸಂದೇಹದ ಉಯ್ಯಾಲೆಯನ್ನೇರಿತು. ದೆವ್ವಗಳಿರುವುದು ನಿಜವಿರಬಹುದೇ—ಎಂದು ಅವರಿಗೆ ಒಮ್ಮೆ ಸಂಶಯವಾಗುವುದು. ಒಡನೆಯೇ ಭಯವಾಗಿ ಮೈ ಜುಮ್ಮೆನ್ನುವುದು. ಮರುಕ್ಷಣದಲ್ಲಿಯೇ ವಿಜ್ಞಾನ ಶಾಸ್ತ್ರದ ಪ್ರಕಾರ ದೆವ್ವಗಳಿಗೆ ನೆಲೆಯಿಲ್ಲವೆಂಬ ಧೈರ್ಯ, ಭಯಮಿಶ್ರವಾದ ಸಂಶಯ. ಈ ತೂಗಾಟಕ್ಕೆ ಸಿಕ್ಕಿ, ರಾಯರು ತತ್ತರಿಸಿದರು. ಆದರೂ ಯಂತ್ರದಂತೆ ಕೆಲಸಮಾಡುತ್ತ, ತಮ್ಮ ಹೆಂಡತಿಯನ್ನು ಕರೆದು ಫಲ ತಾಂಬೂಲವನ್ನು ತರಹೇಳಿ, ಭಾರಿ ದಕ್ಷಿಣೆಯೊಡನೆ ಅದನ್ನು ಶಾಸ್ತ್ರಿಗಳಿಗೆ ಸಮರ್ಪಿಸಿ ಕೈ ಮುಗಿದರು. ಅವರ ಮನಸ್ಸು ಪೂರ್ತಿಯಾಗಿ ಅವರ ವಶದಲ್ಲಿದ್ದ ಪಕ್ಷಕ್ಕೆ ಅಷ್ಟು ಭಾರಿ ದಕ್ಷಿಣೆಯನ್ನು ಖಂಡಿತವಾಗಿಯೂ ಅವರು ಕೊಡುತ್ತಿರಲಿಲ್ಲ. ಶಾಸ್ತ್ರಿಗಳು ಅವರ ಕೊಡುಗೈಯನ್ನು ಕೊಂಡಾಡಿ ಅಲ್ಲಿಂದ ತೆರಳಿದರು. ಸುಬ್ಬರಾಯರ ಹೆಂಡತಿ ನಾಗಮ್ಮನವರು, ''ಶಾಸ್ತ್ರಿಗಳ ಮಾತುಕತೆಗಳನ್ನೆಲ್ಲಾ

ಕೇಳಿದೆ, ಪಕ್ಕದ ಕೊಠಡಿಯಲ್ಲಿದ್ದು ಕೇಳಿದೆ. ಮೊದಲು ಈ ಮನೆಯನ್ನೇ ಬಿಟ್ಟುಬಿಡೋಣ. ಆದಷ್ಟು ಬೇಗ ಬೇರೆ ಮನೆಗೆ ಹೋಗೋಣ'' ಎಂದರು. ಸುಬ್ಬರಾಯರು "ಅಯ್ಯೋ ಹುಚ್ಚಿ! ತಾಲ್ಲೂಕಿಗೇ ಅಮಲ್ದಾರನಾಗಿ ತಾಲ್ಲೂಕಿನಲ್ಲಿಯೇ ದೊಡ್ಡವನಾಗಿರುವವನು ಇಷ್ಟಕ್ಕೆಲ್ಲಾ ಹೆದುರೋದುಂಟೇ?'' ಎಂದರು. ಅಂಜುತ್ತಿದ್ದ ಮನಸ್ಸಿಗೆ ಧೈರ್ಯದ ಹೊರಲೇಪ ಹಾಕಿ ಆಡಿದ ಮಾತುಗಳವು.

ನಾಗಮ್ಮನವರೂ ಸುಮ್ಮನಾಗಲಿಲ್ಲ. ಅದೇ ದಿನ ಬೆಳಗ್ಗೆಯಿಂದ ಕೆಲವರು ಆಳುಗಳೂ ಮತ್ತು ಕೆಲವರು ಮಾನ್ಯ ಮಹಿಳೆಯರೂ, ಆ ಮನೆಯನ್ನು ಕಟ್ಟಿದ್ದ ಸ್ಥಳವು "ತಲೆ ತಲಾಂತರಗಳಿಂದಲೂ'' ದೆವ್ವಗಳ ನೆಲೆಯೆಂದು ಪ್ರಸಿದ್ಧವಾಗಿದ್ದ ಸ್ಥಳವೆಂದು ಹೇಳಿ, ದೆವ್ವಗಳ ಚೇಷ್ಟೆಗಳನ್ನು ಬಣ್ಣಿಸಿದ್ದುದನ್ನೂ, ತಾವೆಲ್ಲ ಹುಟ್ಟಿದುದಕ್ಕೆ ಬಹಳ ಕಾಲ ಹಿಂದೆ ಅದೇ ಸ್ಥಳದಲ್ಲಿ ದೆವ್ವಗಳು "ಹೂವೀಳ್ಯ'' ಮಾಡಿ ಕಾಣಿಕೆಯಾಗಿ ಮುತ್ತೈದೆಗೆ ಕೊಟ್ಟ "ಥಡಿಕಂಚು'' ನೆರೆಯ ಗ್ರಾಮದ ಜೋಯಿಸರ ಮನೆಯಲ್ಲಿದ್ದ ಸಂಗತಿಯನ್ನೂ, ನಾಗಮ್ಮನವರು ಸುಬ್ಬರಾಯರಿಗೆ ವಿಶದವಾಗಿ ತಿಳಿಸಿದರು. ಸುಬ್ಬರಾಯರ ಎದೆಯು ಝಲ್ಲೆಂದಿತಾದರೂ ಭಯವನ್ನು ತೋರ್ಪಡಿಸಿಕೊಳ್ಳಲು ಅವರ ಬಿಂಕವು ಆಸ್ಪದ ಕೊಡಲಿಲ್ಲ. ಅಲ್ಲದೆ, ಮನೆಯಲ್ಲಿ ಇತರರೆಲ್ಲರಿಗಿಂತಲೂ ಹಿರಿಯರಾಗಿದ್ದ ತಾವೇ ಅಧೀರರಾದರೆ, ಉಳಿದವರು ಭಯದಿಂದ ನಡುಗಿಯಾರೆಂಬ ಭಾವನೆಯೂ ಅದಕ್ಕೆ ಅಡ್ಡಿಯನ್ನುಂಟುಮಾಡಿತು. ಅವರು 'ನಿನಗೆಲ್ಲೋ ಹುಚ್ಚು. 'ಥಡಿಕಂಚು' ನೆರೆ ಗ್ರಾಮದಲ್ಲಿ ಜೋಯಿಸರ ಮನೆಯಲ್ಲಿರಬಹುದು. ಆದರೆ, ಅದು ದೆವ್ವ ಕೊಟ್ಟ ಕಂಚೆಂತ ರುಜುವಾತಾದ ಹಾಗೇನು? ಇವರೆಲ್ಲ ಹುಟ್ಟೋದಕ್ಕಿಂತ ಮುಂಚೆ ತಾನೆ ದೆವ್ವಗಳು ಹೂವೀಳ್ಯ ನಡಸಿದ್ದುವೆಂದು ಇವರೆಲ್ಲ ಹೇಳೋದು! ಇವರೇನೂ ಆ ಹೂವೀಳ್ಯವನ್ನೂ ಕಂಡವರಲ್ಲ, ಆ ದೆವ್ವಗಳನ್ನೂ ನೋಡಿದವರಲ್ಲ. ಇದರ ಮೇಲೋ ಈ ಮನೆಯಲ್ಲಿ ದೆವ್ವಗಳ ಕಾಟವಿದೆಯೇ ಎಂತ ಒಬ್ಬರೂ ರುಜುವಾತು ಹೇಳಿಲ್ಲ. ಸುಮ್ಮನೆ ಈ ಮನೆಗೆ ದೆವ್ವಗಳ ದೇಗುಲವೆಂತ ಹೆಸರಿಟ್ಟು ಅನ್ಯಾಯ ಮಾಡಿದ್ದಾರೆ' ಎಂದರು.

ನಾಗಮ್ಮನವರೂ ಹಿಂದೆ ಬೀಳದೆ, "ಅಗ್ಗದ ಬೆಲೆ, ಮುಗ್ಗಿದ ಜೋಳ, ಗೊತ್ತೇ ಇದೆ ಇಂಥಾ, ಅರಮನೆಯಂಥಾ ಮನೆ. ಈ ಮನೆ ಸರಿಯಾಗಿದ್ದರೆ ನಮಗೆ ಈಗಿನಷ್ಟು ಅಗ್ಗದ ಬಾಡಿಗೆಗೆ ಸಿಕ್ತಿತ್ತೇನು? ದೆವ್ವಗಳ ಹಾವಳಿಗಳು ನೂರೆಂಟು ವಿಧವಂತೆ. ಕೆಲವು ದೆವ್ವಗಳು ಸಮ ರಾತ್ರಿಯಲ್ಲಿ ವಿಕಾರವಾಗಿ ಕೂಗುತ್ತವಂತೆ. ಯಾವಯಾವುದೋ ರೂಪು ಗಳನ್ನು ಧರಿಸಿ ಬರುತ್ತವಂತೆ. ಕಪಟದ ಹಕ್ಕಿ ರೆಕ್ಕೆ ಬಡಿದಂತೆ ರಾತ್ರಿಯಲ್ಲಿ ಸದ್ದು ಮಾಡುತ್ತವಂತೆ. ಸೂಕ್ಷ್ಮ ರೂಪದಲ್ಲಿ ಜನಗಳ ಹೊಟ್ಟೆಯೊಳಗೆ ಸೇರಿಕೊಂಡು ಅಜೀರ್ಣರೋಗವನ್ನು ತಂದು ಹಾಕುತ್ತವಂತೆ. ಒಂದಲ್ಲ, ಹತ್ತಲ್ಲ, ನೂರಾರು ಬಗೆಯ ಚೇಷ್ಟೆಗಳನ್ನು ಮಾಡಿ ಗೋಳುಗುಟ್ಟಿಸುತ್ತ ವಂತೆ. ಬೆಣ್ಣೆ ತೆಗೆದು ಮಜ್ಜಿಗೇ ಮಡಕೆಯಲ್ಲಿಟ್ಟಿದ್ದರೆ ಅದೆಲ್ಲಾ ಮತ್ತೆ ಮಜ್ಜಿಗೆಯಲ್ಲೇ ಕರಗಿ ಮಜ್ಜಿಗೆಗೇ ಬೆರತುಹೋಗುವ ಹಾಗೆ ಮಾಡುತ್ತವಂತೆ. ಹೋದ ವರ್ಷ ಈ ಮನೇ ಹಿಂದಿನ ಮನೆಯಲ್ಲಿ ಒಬ್ಬಾಕೆಗೆ ದೆವ್ವ ಮೆಟ್ಟಿ ಕೊಂಡಿತಂತೆ. ಆ ದೆವ್ವ ಮೈಮೇಲೆ ಬಂದಾಗ ಅವಳು ತನ್ನೆದುರಿಗೆ ಬಂದ ಯಾರ ಮನಸ್ಸಿನಲ್ಲಿ ಏನಿರುತ್ತಿತ್ತೆಂಬುದನ್ನೆಲ್ಲ ಹೇಳಿಬಿಡುತ್ತಿದ್ದಳಂತೆ. ಅದು ಬ್ರಾಹ್ಮಣ ಪಿಶಾಚಿಯಂತೆ. ಅದು ಮೈದುಂಬಿದಾಗ ಅವಳು ನಾಲ್ಕು ಸೇರಕ್ಕಿ ಅನ್ನವನ್ನು ತಿಂದುಬಿಡುತ್ತಿದ್ದಳಂತೆ. ಆ ಬ್ರಹ್ಮ ಪಿಶಾಚಿಯನ್ನು ಬಿಡಿಸುವುದಕ್ಕಾಗಿ ದೊಡ್ಡ ಮಂತ್ರವಾದಿಯನ್ನು ಕರೆಸಿದರಂತೆ. ಅವನು ಮಾರಣಹೋಮ ಮಾಡಲು ಕುಳಿತಾಗ ಅವನನ್ನೇ ಆಹುತಿ ತೆಗೆದುಕೊಳ್ಳು ವಂತೆಯೂ, ಅವನು ಸುಮ್ಮನೆ ಹೊರಟುಹೋಗಬೇಕೆಂದೂ ಅವಳ ಮೂಲಕ ಅದು ತಿಳಿಸಿತಂತೆ. ಅವನು ಹೆದರದೆ ಮಾರಣಹೋಮ ಮಾಡಲು ಪ್ರಾರಂ ಭಿಸಿದನಂತೆ. ಆ ಮನೆಯವರೂ ಇತರರೂ ನೋಡುತ್ತಿದ್ದ ಹಾಗೆಯೇ ಅವನು ರಕ್ತ ಕಾರಿಕೊಂಡು ಸತ್ತೇಹೋದನಂತೆ. ಈ ಮನೆ ಹಿಂದಿನ ಮನೆಯಲ್ಲೇ ಇಷ್ಟು ರಂಪರಾದ್ಧಾಂತ ನಡೆದಿರುವಾಗ ಈ ಮನೆಯಲ್ಲಿ ದೆವ್ವಗಳಿಲ್ಲವೆಂದು ಹೇಳೋದು ಹೇಗೆ? ಈ ಮನೇ ಹಿಂದಿನ ಮನೆಯ ಪಕ್ಕದಲ್ಲಾಗಲಿ, ಈ ಮನೆಯ ಪಕ್ಕದಲ್ಲಾಗಲಿ ಯಾರೂ ಮನೆಯನ್ನು ಕಟ್ಟದೆ ಇವೆರಡೂ ಒಂಟೊಂಟಿಯಾಗಿಯೇ ಇರುವುದಕ್ಕೂ ದೆವ್ವಗಳ ಹಾವಳಿ

ಭಯುವೇ ಕಾರಣವಂತೆ, ಸದ್ಯ ಮಕ್ಕಳೆಲ್ಲ ಆಟಕ್ಕೆ ಹೋಗಿವೆ. ಈ ಸುದ್ದಿಯನ್ನೇ ಮಕ್ಕಳೆದುರಿಗೆ ಹೇಳಬಾರದು. ಆದಷ್ಟು ಜೇಗ ಈ ಮನೆ ಬಿಟ್ಟು ಬೇರೆ ಮನೆಗೆ ಹೋಗೋಣ. ಈ ದೆವ್ವಗಳ ದೇಗುಲದ ಗೊಡವೆಯೇ ಬೇಡ'' ಎಂದರು. ಸುಬ್ಬರಾಯರ ಮನಸ್ಸೇ ಕಲಕಿಹೋಗಿದ್ದರೂ ಅವರು ಅದನ್ನು ತೋರ್ಪಡಿಸದೆ ''ದೆವ್ವಗಳೆಂದರೆ ನಾವೇ ನಮಗಿಂತ ಹೆಚ್ಚಿನ ದೆವ್ವಗಳೆಲ್ಲಿವೆ? ದೆವ್ವಗಳಂತೆ, ದೆವ್ವಗಳು! ರುಜುವಾತು ಬಂದ ಹೊರತು, ನಾನು ಯಾವುದನ್ನೂ ನಂಬಲಾರೆ. ತಾಲ್ಲೂಕಿನಲ್ಲೆಲ್ಲ ಶಾಂತಿಯನ್ನೂ ನೆಮ್ಮದಿಯನ್ನೂ ಕಾಪಾಡಬೇಕಾದವನು ನಾನು. ನಾನೇ ದೆವ್ವಗಳಿಗೆ ದಿಗಿಲುಬಿದ್ದು ಅಶಾಂತನಾಗುವುದೆಂದರೆ ಅಗ್ನಿಗೇ ಚಳಿಯಾದ ಹಾಗೆ. ನೋಡೋಣ, ಸುಮ್ಮನಿರು" ಎಂದು ಹೇಳಿದರು; ಮನಸ್ಸನ್ನು ಹೇಗೋ ಗಟ್ಟಿಮಾಡಿಕೊಂಡರು.

ಆ ದಿನ ರಾತ್ರಿ ಎಷ್ಟು ಹೊತ್ತಾದರೂ ನಾಗಮ್ಮನವರಿಗೆ ನಿದ್ರೆ ಬರಲಿಲ್ಲ. ಮಕ್ಕಳೆಲ್ಲ ಸುಖನಿದ್ರೆ ಮಾಡುತ್ತಿದ್ದರೂ ತಮಗೆ ಮಾತ್ರ ನಿದ್ರೆ ಬಾರದಿದ್ದುದನ್ನು ಕಂಡು ನಾಗಮ್ಮನವರು "ನಾನು ಮಗುವಾಗಿದ್ದರೆ?'' ಎಂದುಕೊಂಡರು. ಒಡನೆಯೇ ನಕ್ಕು ''ನಾನೂ ಮಗುವಾಗಿದ್ದರೆ ಈ ಮಕ್ಕಳು ನಿರಾತಂಕವಾಗಿ ಹೀಗೆ ನಿದ್ದೆ ಮಾಡೋದನ್ನ ನಾನೆಲ್ಲಿ ನೋಡುತ್ತಿದ್ದೆ. ಏನು ದಿಗಿಲೋ ಈ ಹಾಳು ಜೀವಕ್ಕೆ! ಏನು ಮಾಡಿದರೂ ನಿದ್ದೆ ಹತ್ತೋ ಹಾಗಿಲ್ಲ'' ಎಂದುಕೊಂಡರು. ''ರಾಮಸ್ಕಂಧಂ....'' ಹೇಳಿದುದಾಯಿತು. ಗಣಪತಿ ಸ್ತೋತ್ರವನ್ನೂ ಆಂಜನೇಯ ಸ್ತೋತ್ರವನ್ನೂ ಹೇಳಿ ಮುಗಿಸಿದುದಾಯಿತು. ''ಆಸ್ತಿಕ, ಆಸ್ತಿಕ'' ಎಂದು ನೂರಾರು ಸಲ ಜಪಿಸಿ ಆಕಳಿಸುವ ಯತ್ನ ಮಾಡಿದುದಾಯಿತು. ಆದಿಶಕ್ತಿಯಾದ ಮಹಾಮಾತೆಯನ್ನು ಪ್ರಾರ್ಥಿಸಿದುದಾಯಿತು. ನಿದ್ರೆ ಬರುವ ಸೂಚನೆಯು ಬೇರೆ ತೋರಲಿಲ್ಲ. ಕೊನೆಗೆ, ಅವರು ''ದೆವ್ವಗಳಿಗೆಲ್ಲಾ ಇವೊತ್ತು ರಜವೆ? ದೆವ್ವಗಳ ಪ್ರಪಂಚದಲ್ಲಿಯೂ ರಜಾ ದಿನಗಳುಂಟೆ? ದೆವ್ವಗಳೆಲ್ಲಾ ಮತ್ತೆಲ್ಲಿಗಾದರೂ ಹೊರಟುಹೋಗಿರಬಹುದೆ? ಇಲ್ಲವಾದರೆ ಅವುಗಳೇಕೆ ವಿಕಾರವಾಗಿ ಕೂಗಿಲ್ಲ?'' ಎಂದುಕೊಂಡರು. ಒಡನೆಯೇ ವಿಕಟವಾದೊಂದು

ಧ್ವನಿಯನ್ನು ಕೇಳಿ ಅವರು ಬೆಚ್ಚಿ "ನಾನು ಮನಸ್ಸಿನಲ್ಲೇ ಹೇಳಿಕೊಂಡ ಮಾತುಗಳೇನಾದರೂ ದೆವ್ವಗಳಿಗೆ ಕೇಳಿಸಿದುವೋ ಏನೊ!" ಎಂದು ಹೇಳಿಕೊಳ್ಳುತ್ತ ಭಯದಿಂದ ನಡುಗುತ್ತ, ಸುಬ್ಬರಾಯರ ಕೊಟಡಿಗೆ ಹೋದರು. ಅವರು ಗೊರಕೆಗಳನ್ನು ಬಿಡುತ್ತ ನಿದ್ರಿಸುತ್ತಿದ್ದುದನ್ನು ಕಂಡು ನಾಗಮ್ಮನವರು "ಇವರದು ಯಮಗುಂಡಿಗೆ! ದೆವ್ವಗಳ ಗುಂಪಿನಲ್ಲಿದ್ದರೂ ಇವರು ಹೀಗೇ ಗೊರಕೆ ಹೊಡೆದಾರೋ ಏನೋ!" ಎಂದುಕೊಂಡು ಸುಬ್ಬರಾಯರನ್ನು ನಿದ್ರೆಯಿಂದ ಎಚ್ಚರಗೊಳಿಸಿದರು. "ಸ್ವಲ್ಪ ಏಳಿ! ಏನೋ ವಿಕಾರವಾದ ಸದ್ದು. ದೆವ್ವ ಕೂಗುವಂತಿದೆ" ಎಂದರು. ನಿದ್ರೆಯ ಜೋಂಪಿನಲ್ಲಿ ಸುಬ್ಬರಾಯರು "ವಿಕಾರವಾದ ಸದ್ದೂ ಇಲ್ಲ. ದೆವ್ವದ ಕೂಗೂ ಇಲ್ಲ. ಅದೆಲ್ಲಾ ನಿನ್ನ ಮನಸ್ಸಿನ ವಿಕಾರವೇ ಇರಬೇಕು" ಎಂದರು. ಕೂಡಲೇ ವಿಕಟವಾದ ಕೂಗು. ಅದರ ಹೊಳಲೇ ಅಂತರಿಕ್ಷವನ್ನೆಲ್ಲ ಮೊಳಗುತ್ತಿದ್ದಂತೆಯೂ ತೋರಿತು. ಆ ಬಳಿಕ ವಿಕಾರವಾದ ಆ ಕೂಗೇ ಸ್ಥಳದಿಂದ ಚಲಿಸುತ್ತ ದಿಕ್ಕುಗಳಿಂದಲೂ ಮಾರ್ದನಿಗೊಂಡಂತಾಯಿತು. ಎರಡೂ ದೆವ್ವಗಳ ಧ್ವನಿಗಳಿಂದೇ ದಂಪತಿಗಳಿಗೆ ಸಂದೇಹ ಹುಟ್ಟಿತು. ಸುಬ್ಬರಾಯರು ಮಾತ್ರ ತಮ್ಮ ಸಂದೇಹವನ್ನೂ ದಿಗಿಲನ್ನೂ ಹೊರಪಡಿಸದೆ "ದುಡುಕಬಾರದು. ಸಾವಧಾನವಾಗಿ ವಿಚಾರ ಮಾಡೋಣ. ಪರಮೇಶ್ವರ, ಭೂತನಾಥ, ಗಣಗಳಿಗೂ ಒಡೆಯ. ಪರಮೇಶ್ವರನನ್ನು ಸ್ತೋತ್ರ ಮಾಡುತ್ತಾ ನಿದ್ದೆ ಬರಿಸಿಕೊ. ನನಗಂತೂ ಇವೊತ್ತು ವಿಪರೀತ ನಿದ್ದೆ" ಎಂದು ಹೇಳುತ್ತಿರುವಾಗಲೇ ಜೂಗರಿಸಿ ಮಲಗಿ ಮುಂಚಿನಂತೆಯೇ ಗೊರಕೆಗೆ ಪ್ರಾರಂಭಿಸಿದರು. ನಾಗಮ್ಮನವರು ಆಗಿನ ಸ್ಥಿತಿಯಲ್ಲಿಯೂ ನಕ್ಕು, "ಇವರೆಲ್ಲೋ ಮನುಷ್ಯ ಜಾತಿಗೇ ಸೇರಿಲ್ಲ" ಎಂದುಕೊಂಡು ತಮ್ಮ ಕೊಟಡಿಗೆ ಹೋಗಿ ಮಲಗಿದರು; ಶಿವಸ್ತುತಿಗೆ ಪ್ರಾರಂಭಿಸಿದರು. ಆದರೂ ದೆವ್ವಗಳ ಎರಡು ಧ್ವನಿಗಳೂ ಮತ್ತೆ ಕೇಳಿಸಿದುವು. ನಾಗಮ್ಮನವರು ತಮ್ಮ ಶಿವಸ್ತುತಿಯು ಕೈಲಾಸಕ್ಕೆ ಕೇಳಿಸಿ ಅಲ್ಲಿರುವ ಭೂತನಾಥನಿಂದ ದೆವ್ವಗಳಿಗೆ ಕೂಗಕೂಡದೆಂದು ಆಜ್ಞೆ ಬರಲು ಸ್ವಲ್ಪಕಾಲ ಹಿಡಿಯಬಹುದೆಂಬ ನಂಬಿಕೆಯಿಂದ ಕೂಡಿ ಮತ್ತಷ್ಟು ಹುರುಪಿನಿಂದ ಶಿವಸ್ತುತಿ ಮಾಡ

ಲಾರಂಭಿಸಿದರು. ಆ ಬಳಿಕ "ದೆವ್ವಗಳ ಎರಡು ಧ್ವನಿಗಳೂ" ಅಡಗಿಯೇ ಹೋದುವು; ಅವು ಮತ್ತೆ ಕೇಳಿಸಲೇ ಇಲ್ಲ; ನಾಗಮ್ಮನವರಿಗೆ ಆಶ್ಚರ್ಯ ವಾಯಿತು. ಅವರು "ನಿದ್ದೆಗಣ್ಣಿನಲ್ಲಿ ಕೂಡ ಒಳ್ಳೇ ಉಪಾಯವನ್ನೇ ಹೇಳಿಬಿಟ್ಟರು. ಇಷ್ಟೆಲ್ಲಾ ಬುದ್ಧಿಯಿಲ್ಲದೆ ಹೋಗಿದ್ದರೆ ಮಾಮಲೆ ಕೆಲಸ ಸಿಕ್ಕುತ್ತಿತ್ತೆ? ಇವರೆಲ್ಲೋ ಶಿವಸ್ತುತಿ ಮಾಡಿಯೇ ಮಲಗಿರಬೇಕು. ಅದಕ್ಕೇ ಹೀಗೆ ನಿದ್ದೆ ಮಾಡುತ್ತಿದ್ದಾರೆ'' ಎಂದುಕೊಂಡು, ಭವರೋಗ ವೈದ್ಯನೆಂಬ ಮಾತಿನ ಅರ್ಥವನ್ನರಿಯದಿದ್ದೂ "ಭೂತನಾಥ ಭವರೋಗ ವೈದ್ಯ! ಮಕ್ಕಳನ್ನೂ, ನನ್ನನ್ನೂ ಸುಖವಾಗಿ ಕಾಪಾಡು ನಮ್ಮಪ್ಪಾ?'' ಎಂದು ಬಾಯಿತುಂಬ ಪ್ರಾರ್ಥಿಸಿ, ಆ ಬಳಿಕ ಕಣ್ಣು ತುಂಬ ನಿದ್ರೆ ಮಾಡಿದರು.

೩

ಆ ಬಳಿಕ ಒಂದೆರಡು ಘಂಟೆಗಳಾಗುವ ವೇಳೆಗೆ ಸುಬ್ಬರಾಯರಿಗೆ ಎಚ್ಚರವಾಯಿತು. ಮತ್ತೆ "ಎರಡು ದೆವ್ವಗಳ ಧ್ವನಿಗಳು'' ಸಿದ್ಧ. ಸುಬ್ಬರಾಯರು "ವಿಕಟವಾದ ಈ ಬಗೆಯ ಧ್ವನಿಗಳನ್ನೇ ನಾನೆಂದೂ ಕೇಳಿಲ್ಲ. ಇದೇನು ಫಜೀತಿಯಪ್ಪ! ಇವು ದೆವ್ವಗಳ ಧ್ವನಿಯೋ, ಅಲ್ಲವೋ. ದೇವರೇ ಬಲ್ಲ'' ಎಂದುಕೊಂಡು, ನಾಗಮ್ಮನವರು ಮಲಗಿದ್ದ ಕೊಟಡಿಗೆ ಹೋಗಿ ನೋಡಿದರು. ನಾಗಮ್ಮನವರು ಗಾಢ ನಿದ್ರೆಯಲ್ಲಿದ್ದು ದನ್ನು ಕಂಡು ತಮ್ಮ ಮನಸ್ಸಿನಲ್ಲಿ 'ಅಬ್ಬ! ಎಷ್ಟು ಧೈರ್ಯ, ಇವಳದು! ನನಗೆ ಒಳಗೆ ದಿಗಿಲು, ಹೊರಗೆ ಧೈರ್ಯ. ಇವಳಿಗೆ ಹೊರಗೆ ದಿಗಿಲು, ಒಳಗೆ ಧೈರ್ಯ; ಅದಕ್ಕೇ ಹೀಗೆ ನಿದ್ದೆ'' ಎಂದುಕೊಂಡು ತಮ್ಮ ಕೊಟಡಿಗೆ ಹಿಂತಿರುಗಿದರು. ಕೊಟಡಿಯ ಬಾಗಿಲನ್ನು ಹಾಕಿ ದೀಪವನ್ನು ಹೊತ್ತಿಸಿ, "ಆಫೀಸ್ ಕೆಲಸವನ್ನಾದರೂ ಮಾಡಿ, ಭಯವನ್ನು ನನ್ನ ಮನಸ್ಸಿನೊಳಗೇ ಆಳವಾಗಿ ಹೂಳಿ ಮೈಮರಿಯೋಣ, ಎಂದುಕೊಂಡು ಮೇಜಿನ ಬಳಿಯಲ್ಲಿ ಕುಳಿತು, ರಾಶಿಯಾಗಿಟ್ಟಿದ್ದ ಕಾಗದ ಪತ್ರಗಳ ಕಟ್ಟುಗಳನ್ನು ಒಂದೊಂದಾಗಿ

ಪರಿಶೀಲಿಸಿ ಬರೆವಣಿಗೆಗೆ ಪ್ರಾರಂಭಿಸಿದರು. ನಿಶ್ಶಬ್ದವಾಗಿ ಸ್ವಲ್ಪ ಹೊತ್ತು ಕಳೆಯಿತು. ಮತ್ತೆ "ಎರಡು ದೆವ್ವಗಳ ಧ್ವನಿಗಳು ಕೇಳಿಸಿದುವು. ಸಂಗಡಲೇ ಹತ್ತಾರು ಕಪಟಗಳು ರೆಕ್ಕೆಗಳನ್ನು ಬಡಿದರೂ ಆಗದಷ್ಟು "ಪಟ ಪಟ" ಶಬ್ದವೂ ಕೇಳಿಸಲು ಪ್ರಾರಂಭವಾಯಿತು. ಸುಬ್ಬರಾಯರು ಕುಳಿತಿದ್ದುದು ಮಹಡಿಯ ಮೇಲಿನ ಕೊಟಡಿಯಲ್ಲಿ. ಆ ಕೊಟಡಿಯ ಹೊರ ಬಾಗಿಲನ್ನು ತೆಗೆದು ಬಿಸಿಲು ಮಚ್ಚಿಗೆ ಹೋಗಿ ಅಲ್ಲಿಂದ ಅಷ್ಟು ಜೋರಾಗಿ ಬರುತ್ತಿದ್ದ ದೆವ್ವದ ಶಬ್ದವನ್ನು ಪ್ರತ್ಯಕ್ಷವಾಗಿ ಪರೀಕ್ಷಿಸಿನೋಡಲು ಅವರಿಗೆ ಭಯ. ಆದರೂ, ಸುಬ್ಬರಾಯರು ಎದೆಗುಂದಲಿಲ್ಲ. ಡಬಡಬನೆ ಬಡಿದುಕೊಳ್ಳುತ್ತಿದ್ದ ಹೃದಯಕೋಶವು ಮೊದಲಿನಂತೆ ಮಂದಗತಿಗೆ ಬರುವಂತೆ ಮಾಡುವ ಉದ್ದೇಶದಿಂದ ಅವರು ಎದೆಯನ್ನು ನೀವಿಕೊಂಡು, ಕಾಗದ ಪತ್ರಗಳ ಕಟ್ಟುಗಳನ್ನು ಪರಿಶೀಲಿಸುತ್ತ, ಬರೆವಣಿಗೆಯ ಕೆಲಸದಲ್ಲಿ ಮಗ್ನರಾಗಿ ಹೇಗೋ ಮೈಮರೆತರು ; ಒಂದು ಕಟ್ಟಿನ ಪರಿಶೀಲನೆಯು ಮುಗಿದು ಮತ್ತೊಂದನ್ನು ತೆಗೆದುಕೊಳ್ಳುವಷ್ಟರಲ್ಲಿ ಅದೇ "ಪಟ ಪಟ" ಶಬ್ದವು ಕಿವಿಗೆ ಬಿದ್ದು ಮೈ ಜುಮ್ಮೆನ್ನುವುದು ; ಅವರು ಪುತ್ತೆ ಧೈರ್ಯ ವನ್ನು ತಂದುಕೊಂಡು ಕೆಲಸದಲ್ಲಿ ಮಗ್ನರಾಗುವರು. ಹೀಗೆಯೇ ಬಹಳ ಕಾಲವನ್ನು ಕಳೆದ ಮೇಲೆ ನಾಗಮ್ಮನವರ ಕೊಟಡಿಯಿಂದ "ಅಲಾರಂ" ಗಡಿಯಾರದ ಐದೂವರೆ ಘಂಟೆಯನ್ನು ಸೂಚಿಸುವ ಘಂಟಾನಾದವಾಯಿತು. ನಾಗಮ್ಮನವರು ನಿದ್ರೆಯಿಂದ ಎಚ್ಚತ್ತು, ಹುಡುಗರು, ಕಾಲಿನಿಂದ ಒದೆದು ದೂರಕ್ಕೆ ತಳ್ಳಿದ್ದ ರಗ್ಗುಗಳನ್ನು ಹೊದ್ದಿಸಿ ಸುಬ್ಬರಾಯರ ಕೊಟಡಿಗೆ ಬಂದು, ಅವರು ಕೆಲಸ ಮಾಡುತ್ತಿದ್ದುದನ್ನು ಕಂಡು "ಎಷ್ಟು ಹೊತ್ತಿನಿಂದ ಕೆಲಸ ಮಾಡ್ತಿದ್ದೀರೋ ಏನೋ!" ಎಂದರು. ಸುಬ್ಬರಾಯರು "ಅಮಲ್ದಾರಿ-ಅಥವಾ ನಿನ್ನ ಮಾತಿನಲ್ಲಿ ಹೇಳುವುದಾದರೆ ಮಾಮಲೆ-ಅಂದರೆ ಸಾಮಾನ್ಯ ವೇನು ? ನೀನು ಭೇಷಾಗಿ ನಿದ್ದೆ ಮಾಡಿದೆ" ಎಂದರು. ನಾಗಮ್ಮನವರು ತಮ್ಮ ಕೊಟಡಿಗೆ ಹೋದ ಮೇಲೆ ತಾವು ಶಿವಸ್ತುತಿ ಮಾಡಿದುದನ್ನೂ, ತಮಗೆ ನಿದ್ರೆ ಬಂದುದನ್ನೂ ವರ್ಣಿಸಿ ಹೇಳಿದರು ; ರಾಯರು ಗೊರಕೆ ಹೊಡೆಯ ಲಾರಂಭಿಸಿದಾಗ ತಾವು "ಇವರೆಲ್ಲೋ ಮನುಷ್ಯ ಜಾತಿಗೇ ಸೇರಿಲ್ಲ"

ಎಂದು ತಮ್ಮ ಮನಸ್ಸಿನಲ್ಲಿ ಹೇಳಿಕೊಂಡುದನ್ನೂ ತಿಳಿಸಿದರು. ಸುಬ್ಬರಾಯರು ನಕ್ಕು ಸುಮ್ಮನಾದರು. ನಾಗಮ್ಮನವರು "ಇವೊತ್ತು ಹೇಗೂ ಅಡಿಗೆಯವನಿಲ್ಲ. ನಾನೇ ಕಾಫಿ ಮಾಡ್ತೀನಿ. ಬೇಗ ಅಡಿಗೆ ಮನೆಗೆ ಬಂದು ಬಿಡಿ'' ಎಂದು ಹೇಳಿ ಹೊರಟುಹೋದರು. ಸುಬ್ಬರಾಯರು ಆ ಬಳಿಕ ಸ್ವಲ್ಪ ಹೊತ್ತು ಕೆಲಸ ಮಾಡುತ್ತಿದ್ದು, ಕಾಗದ ಪತ್ರಗಳ ಕಟ್ಟುಗಳನ್ನೆಲ್ಲ ಓರಣವಾಗಿ ಜೋಡಿಸಿಟ್ಟು ಮಹಡಿಯಿಂದ ಕೆಳಕ್ಕಿಳಿದು ಹೋಗಿ ಪ್ರಾತರ್ವಿಧಿಗಳನ್ನು ತೀರಿಸಿ ಅನಂತರ ಕಾಫಿಯನ್ನು ಕುಡಿಯಲು ಅಡಿಗೆಯ ಮನೆಗೆ ಹೋದರು. ಅವರು ಹಿಂದಿನ ರಾತ್ರಿ ತಮಗೆ ಎಚ್ಚರವಾದುದನ್ನೂ, ತಾವು "ಎರಡು ದೆವ್ವಗಳ ಧ್ವನಿ''ಯನ್ನು ಕೇಳಿದುದನ್ನೂ 'ಪಟ ಪಟ' ಶಬ್ದವಾಗುತ್ತಿದ್ದುದನ್ನೂ ತಮ್ಮ ಹೆಂಡತಿಯೊಡನೆ ಹೇಳಿದರು. ನಾಗಮ್ಮನವರು, 'ನೋಡಿದಿರೋ, ನಾನು ಕೇಳಿದ್ದ ಸಂಗತಿ ಹೇಗೆ ನಿಜವೆಂದು ನಿಮಗೆ ಕಂಡು ಬಂತು? ವಿಕಾರವಾದ ಧ್ವನಿಗಳನ್ನೂ ಕೇಳಿದೆವು. ಪಟಪಟ ಶಬ್ದವನ್ನೂ ನೀವು ಕೇಳಿದಿರಿ. ಇನ್ನು ಈ ಮನೆಯ ಗೊಡವೆಯೇ ಸಾಕು. ಮುಂದೆ ದೊಡ್ಡ ಹಗರಣವೇನಾದರೂ ನಡೆದು ತೊಂದರೆಯಾದೀತು. ಅದಕ್ಕೆ ಮೊದಲೇ ಬೇರೆ ಮನೆಗೆ ಹೊರಟು ಹೋಗೋಣ'' ಎಂದರು.

"ಪಾಪ! ಆ ಚಿಕ್ಕ ಶಾಸ್ತ್ರಿಗಳು ನಿನ್ನೆ ಅವರ ಅಣ್ಣನವರು ಇಲ್ಲಿಂದ ಹೊರಟು ಹೋದ ಸ್ವಲ್ಪ ಹೊತ್ತಿಗೇ ಬಂದು ಎಲ್ಲಾ ಸಂಗತಿಗಳನ್ನೂ ವಿವರಿಸಲಿಲ್ಲವೆ ?"

"ಅವರಿಬ್ಬರಲ್ಲಿ ಯಾರ ಮಾತುಗಳನ್ನು ನಂಬಬೇಕೋ ಕಾಣೆ."

"ನನಗೇನೊ ಇಬ್ಬರೂ ಸರಳ ಹೃದಯರೆಂದೇ ತೋರುತ್ತೆ."

"ಹೀಗೆ ಹೇಳಿದರೆ ತಂಟೆಯೇ ತೀರಿತು. ಈ ರೀತಿ ಹೇಳುವವರು ಬಹು ಚೆನ್ನಾಗಿ ಮಾಮುಲಿ ಮಾಡುವಿರಿ.

"ನನ್ನ ಮಾತು ಕೊಂಚ ಕೇಳು. ಮಸಲಾ ಈ ಮನೆಯಲ್ಲಿ ದೆವ್ವವಿದೆಯೆಂದು ಭಾವಿಸೋಣ. ಹಾಗಿದ್ದಲ್ಲಿ ದೊಡ್ಡ ಶಾಸ್ತ್ರಿಗಳು ನಮಗೆ ಹೇಳಿದ ಮಾತುಗಳಿಂದಲೇ ಅವರ ಸರಳತನವು ಗೊತ್ತಾಗುತ್ತೆ. ತಮ್ಮನಿಗೆ

ನಷ್ಟವಾಗುವುದನ್ನೂ ಗಮನಿಸದೆ ನಮಗೆ ಅವರು ಎಚ್ಚರಿಕೆ ಹೇಳಿದರು. ನಮಗೆ ಎಚ್ಚರಿಕೆ ಹೇಳಿದ ಸಂಗತಿಯನ್ನೂ ನೇರವಾಗಿ ಚಿಕ್ಕ ಶಾಸ್ತ್ರಿಗಳ ಮನೆಗೆ ಹೋಗಿ ಅವರಿಗೆ ತಿಳಿಸಿದರು. ಮುಚ್ಚುಮರೆಯಾಗಲಿ ಮೋಸ ವಾಗಲಿ ದೊಡ್ಡ ಶಾಸ್ತ್ರಿಗಳ ಬಳಿಗೇ ಸುಳಿಯುವಂತಿಲ್ಲ. ಚಿಕ್ಕ ಶಾಸ್ತ್ರಿಗಳ ಮನಸ್ಸೂ ಎಷ್ಟು ಸರಳವಾಗಿದೆ, ನೋಡು: ಅವರೇನು ಹೇಳಿದರು? 'ಸ್ವಾಮಿ, ನನಗೇನೋ ದೆವ್ವಗಳಲ್ಲಿ ನಂಬಿಕೆಯಿಲ್ಲ. ನಮ್ಮ ಅಣ್ಣನವರಿಗೆ ದೆವ್ವಗಳಿವೆಯೆಂಬ ನಂಬಿಕೆಯಿದೆ. ಅದಕ್ಕೇ ಅವರು ಇಲ್ಲಿ ಮನೆ ಕಟ್ಟಿಸ ಬೇಡವೆಂದರು. ನಾನು ಕಟ್ಟಿಸಿದೆ. ಯುದ್ಧಕ್ಕೆ ಮುಂಚೆ ಕಟ್ಟಿಸಿದ ಮನೆಗೆ ಈಗಿನ ಈ ಸುಟ್ಟ ಕಾಲದ ದುಬಾರಿ ಬಾಡಿಗೆ ತೆಗೆದುಕೊಳ್ಳಬಾರದು. ಅಂಥ ಅನ್ಯಾಯದ ಹಣ ನನಗೆ ಬೇಡ. ಅದಕ್ಕಾಗಿ ತಮಗೆ ಅಗ್ಗದ ಬಾಡಿಗೆಗೆ ಕೊಟ್ಟೆ. ದುರಾಶೆ ಯಾರಿಗೂ ತರವಲ್ಲ. ಮನೆಯಲ್ಲಿರುವುದೂ, ಮನೆಯನ್ನು ಬಿಡುವುದೂ ತಮ್ಮ ಚಿತ್ತ' ಎಂದು ಹೇಳಿದರು. ಎಂಥ ಸರಳ ಹೃದಯ ಅವರದು! ಮಸಲಾ ಈ ಮನೆಯಲ್ಲಿ ದೆವ್ವವಿಲ್ಲವೆನ್ನು. ಆಗಲೂ ಅವರಿಬ್ಬರದೂ ತಪ್ಪಿಲ್ಲ. ತಮ್ಮ ತಮ್ಮ ಆತ್ಮಸಾಕ್ಷಿಗನುಸಾರವಾಗಿ ಅವರಿಬ್ಬರೂ ನಡೆದಿದ್ದಾರೆ."

"ಆದರೆ, ನಮಗೆ ಮಾತ್ರ ಪೀಕಲಾಟ ಬಂದಿದೆ."

ಸುಬ್ಬರಾಯರು ಉತ್ತರವೇನನ್ನೂ ಹೇಳದೆ ಮಹಡಿಯ ಮೇಲಕ್ಕೆ ಹೋದರು. ಕೆಲವೇ ನಿಮಿಷಗಳಲ್ಲಿ ಆತುರವಾಗಿ ಇಳಿದು ಬಂದು ನಾಗಮ್ಮ ನವರೊಡನೆ "ನನ್ನ ಅಭಿಪ್ರಾಯ ಬೇರೆಯಾಯಿತು. ಈ ಮನೆಯಲ್ಲಿ ದೆವ್ವವಿರುವುದು ನಿಜ. ನನ್ನ ಕೊಠಡಿಗೆ ಒಬ್ಬರೂ ಹೋಗಿಲ್ಲ, ಮಕ್ಕಳು ಗಾಢ ನಿದ್ದೆ ಮಾಡ್ತಿದ್ದಾರೆ. ಕಿಟಕಿ ಬಾಗಿಲುಗಳೆಲ್ಲಾ ಮುಚ್ಚಿವೆ. ಯಾರೂ ಕೊಟಡಿಗೆ ಹೋಗಿಲ್ಲ. ಆದರೂ ನಾನು ಜೋಡಿಸಿಟ್ಟಿದ್ದ ಕಾಗದ ಪತ್ರಗಳೆಲ್ಲಾ ಅಸ್ತವ್ಯಸ್ತವಾಗಿ ಹೇಗೆ ಹೇಗೋ ಹರಡಿಹೋಗಿವೆ. ಇದು ಭೂತಚೇಷ್ಟೆಯೇ ಇರಬೇಕು. ಇವೊತ್ತೇ ಮನೆಯನ್ನು ಬಿಟ್ಟು ಬಿಡೋಣ. ಛತ್ರಕ್ಕಾದರೂ ಹೋಗಿದ್ದು ಮೂರು ನಾಲ್ಕು ದಿನಗಳೊಳಗಾಗಿ ಬೇರೆ ಮನೆ ಹುಡುಕಿಸಿ ಗೊತ್ತುಮಾಡೋಣ' ಎಂದರು ನಾಗಮ್ಮನವರು 'ನನ್ನ ಮಾತು ತಾನೆ

ಇನ್ನೇನು ? ನಾನೇನು ತೆಲುಗಿನಲ್ಲಿ ಹೇಳಿದೆನೆ ? ನಾನು ಹೇಳಿದಾಗ ಅದು ಪಥ್ಯವಾಗಲಿಲ್ಲ' ಎಂದರು. ಅಷ್ಟರಲ್ಲಿ ಅಲ್ಲಿಗೊಬ್ಬ ಜವಾನನು ಬಂದುದನ್ನು ಕಂಡು ನಾಗಮ್ಮನವರು 'ರಾತ್ರಿಯೇನಾದರೂ ವಿಕಾರ ಸ್ವರ ನಿನ್ನ ಕಿವಿಗೆ ಬಿತ್ತೇನಪ್ಪ? ನೀನು ಇಲ್ಲೇ ಮಲಗಿದ್ದೆಯಲ್ಲಾ, ನಿಮ್ಮ ಕೊಠಡಿಯಲ್ಲಿ ಏನಾದರೂ ಕೆಟ್ಟಧ್ವನಿ ಕೇಳಿಸಿತೇನು ?" ಎಂದರು. ಅವನು ರಾತ್ರಿ ಅನೇಕ ಸಾರಿ ಗೂಬೆಗಳು ಕೂಗಿ ಹಾರಾಡುತ್ತಿದ್ದುದನ್ನೂ, ಊರು ಹೊರಗೆ ನರಿಗಳು ಸಿಳ್ಳುಧ್ವನಿಯಲ್ಲಿ ಕಿರಿಚುತ್ತಿದ್ದುದನ್ನೂ, ರಾತ್ರಿ ನಿಶ್ಯಬ್ದವಾಗಿದ್ದ ಕಾರಣ ಆ ಕೂಗು ಕಿವಿಯ ಹತ್ತಿರದಲ್ಲಿದ್ದಂತೆ ಕೇಳಿಸಿದುದನ್ನೂ ತಿಳಿಸಿದನು. ಬೆಂಗಳೂರಿನಲ್ಲಿ ಬೆಳೆದಿದ್ದ ಸುಬ್ಬರಾಯರು ಗೂಬೆಯ ಕೂಗನ್ನಾಗಲಿ ಅಥವಾ ನರಿಯ ಕೂಗನ್ನಾಗಲಿ ಮತ್ತಾವಾಗಲೂ ಕೇಳಿರಲಿಲ್ಲ. ವಿಕಟವಾದ ಧ್ವನಿಯ ವಿಚಾರವೇನೊ ವಿಶದವಾಯಿತು. ಸಮರಾತ್ರಿಯಿಂದಲೂ 'ಪಟ ಪಟ' ಶಬ್ದ ಕೇಳಿದ ಬಗೆ ಹೇಗೆಂಬ ಸಂದೇಹದಿಂದ ಸುಬ್ಬರಾಯರು ತಲ್ಲಣಿಸುತ್ತ ಮಹಡಿಯ ಮೇಲಕ್ಕೆ ಹೋಗಿ ತಮ್ಮ ಕೊಠಡಿಯನ್ನು ಸೇರಿ ಆ ಜವಾನನನ್ನು ಕರೆದು, 'ಕೊಟಡಿಯಿಂದ ಬಿಸಿಲು ಮೆಟ್ಟಿಗೆ ಹೋಗುವ ಆ ಬಾಗಿಲನ್ನು ತೆಗೆಯೋ" ಎಂದು ಅಪ್ಪಣೆ ಮಾಡಿ ತಾವೂ ಅವನನ್ನು ಹಿಂಬಾಲಿಸಿದರು. ಹಿಂದಿನ ಆಳುಗಳು ಒಗೆದು ಗೋಡೆಯ ಮೇಲಿನ ಮೊಳೆಗಳಿಗೆ ಕೊನೆಗಳನ್ನು ಬಿಗಿದಿದ್ದ ಎರಡು ಪಂಚೆಗಳೂ ಗಾಳಿಗೆ ಹಾರಾಡುತ್ತಿದ್ದುವು. ಆಳುಗಳು ಅವುಗಳನ್ನು ಬಿಚ್ಚಿ ತೆಗೆದುಕೊಂಡು ಹೋಗಿ ಮಡಿಸಿಡುವುದನ್ನು ಮರೆತಿದ್ದರು. 'ಪಟ ಪಟ' ಶಬ್ದಕ್ಕೆ ಆ ಪಂಚೆಗಳೇ ಕಾರಣವೇ ಹೊರತು ಭೂತಚೇಷ್ಟೆಯೇನೂ ಅಲ್ಲವೆಂಬುದು ಸುಬ್ಬರಾಯರ ಮನಸ್ಸಿಗೆ ಸ್ಪಷ್ಟವಾಯಿತು. ಅವರ ಮನಸ್ಸಿನ ಎರಡು ಸಮಸ್ಯೆಗಳೇನೊ ಬಗೆಹರಿದುವು. ಇನ್ನುಳಿದುದು ಕಾಗದ ಪತ್ರಗಳು ಅಸ್ತವ್ಯಸ್ತವಾಗಿ ಹರಡಿದ್ದ ಸಮಸ್ಯೆ! ಸುಬ್ಬರಾಯರು ಅದನ್ನು ಭೇದಿಸಲಾರದೆ ಕರೆಕರೆಪಡುತ್ತ ಮಹಡಿಯಿಂದ ಕೆಳಕ್ಕಿಳಿದು ಬಂದರು ; ಅವರು ಏನನ್ನೋ ಆಲೋಚಿಸುತ್ತ ಊಟದ ಮನೆಯಲ್ಲಿ ಸುತ್ತಾಡುತ್ತಿರುವಲ್ಲಿ, ಎಂಟು ವರ್ಷ ವಯಸ್ಸಿನ ಅವರ ಮಗನು ಮಹಡಿಯಿಂದಿಳಿದು ಬಂದು "ಅಮ್ಮಾ, ಅಮ್ಮಾ ಅಣ್ಣನಿಗೇ

ಬೇರೆ ಕಣ್ಣಮ್ಮ. ನಮ್ಮ ಕಣ್ಣಿನಂಥ ಕಣ್ಣಲ್ಲ. ಇವೊತ್ತು ಪತ್ತೆ ಮಾಡ್ಬಿಟ್ಟೆ, ನಾನು ಪತ್ತೆ ಮಾಡ್ಬಿಟ್ಟೆ'' ಎಂದು ಹೇಳಿ ಹಿಗ್ಗುತ್ತ ಅಡಿಗೆಯ ಮನೆಗೆ ನುಗ್ಗಿದನು. ನಾಗಮ್ಮನವರು ''ಅವರಿಗೆ ಬೇರೆ ಕಣ್ಣೆಂದರೇನೊ? ಇದೇನೋ ನಿನ್ನ ಮಾತು?'' ಎಂದು ಕೇಳಿದರು. ಅವನು ''ಇಲ್ಲಿ ಕೇಳಮ್ಮಾ ಹೇಳ್ತೀನಿ. ಅಣ್ಣ ನನ್ನ ಕೈಲಿ ಕನ್ನಡಕ ಮುಟ್ಟಿಸಿರಲಿಲ್ಲ. ಮುಟ್ಟಿದ್ರೇ ಬಯ್ಯೋರು, ಇವೊತ್ತು ಅಣ್ಣನ ಕೋಣೇಲಿ ದೀಪಾ ಯಾಕೆ ಉರೀತಿದೆ—ಅಂತಾ ಅಲ್ಲಿಗೆ ಹೋದೆ. ಯಾರೂ ಇರಲಿಲ್ಲ. ಕನ್ನಡಕಾ ಮೇಜಿನ ಮೇಲಿತ್ತು, ಅದನ್ನು ಹಾಕಿಕೊಂಡು ನೋಡಿದೆ. ಸರಿಯಾಗಿ ಒಂದೂ ಕಾಣಿಸ್ಲೇ ಇಲ್ಲ. ಅಕ್ಷರ ಗೆರೇ ಎಲ್ಲಾ ಹ್ಯಾಗ್ಯಾಗೋ ಕಾಣಿಸತ್ವೆ. ಅಲ್ಲಿದ್ದ ಕಾಗದಗಳ ರಾಶೀಯೆಲ್ಲಾ ತಿರುಗಿಸಿ, ತಿರುಗಿಸಿ ನೋಡಿನೋಡಿ ಸಾಕಾದೆ. ಹ್ಯಾಗ್ಯಾಗೋ ಕಾಣ್ತಿತ್ತು. ತಿರುಗೀ ನಿದ್ದೆ ಬಂದ ಹಾಗಾಯ್ತು. ಕನ್ನಡಕಾ ತೆಗೆದಿಟ್ಟು ಮತ್ತೆ ಹಾಸಿಗೆ ಮೇಲೆ ಮಲಗಿದೆ. ನಿದ್ದೆಬಂತು. ಈಗ ಎಚ್ಚರವಾಯಿತು. ಅಣ್ಣನ ಕಣ್ಣೇ ಬೇರೆ ಬಗೆಯ ಕಣ್ಣು; ಆದಕ್ಕೇ ಅವರಿಗೆ ಆ ಕನ್ನಡಕದಲ್ಲಿ ಕಾಣುತ್ತೆ; ನಮಗೆಲ್ಲಾ ಕಾಣೋದಿಲ್ಲ. ಅಲ್ಲೇನಮ್ಮ?" ಎಂದ. ಸುಬ್ಬರಾಯರು ಆ ಮಾತುಗಳನ್ನು ಕೇಳಿ ಸ್ತಬ್ಧರಾದರು. ನಾಗಮ್ಮನವರು ನಗುತ್ತ, ''ಸಾಕೋ ನಿನ್ನ ಹರಟೆ. ಬೇಗ ಮುಖಾ ತೊಳೆದುಕೊಂಡು ಬಾ, ಕಾಫೀ ಆಗಿದೆ'' ಎಂದರು.

# ಅಚ್ಯುತರಾಯರ ಇಷ್ಟ್ಲೀ 'ಅಲೋಯೆನ್ಸ್'

## ೧

ಅಂದು ಅಮಾವಾಸ್ಯೆ. ಒಂದು ನಕ್ಷತ್ರವೂ ಕಾಣಿಸದಷ್ಟು ದಟ್ಟವಾಗಿ ಕವಿದು ಆಕಾಶವನ್ನು ಮರೆಮಾಡಿ ಆವರಿಸಿಕೊಂಡಿದ್ದ ಮೇಘಗಳ ಗಡಾವಣೆ. ಆಗಾಗ ಕಣ್ಣು ಕೋರೈಸುವ ಸೆಳೆಮಿಂಚುಗಳು. ಮರಗಳೆಲ್ಲ ಮುರಿದು ಬೀಳುವಂತೆ ತೋರುತ್ತಿದ್ದ ಬಿರುಗಾಳಿಯ ರಭಸ. ರಾಹುಕೇತುಗಳ ಪರಿವಾರದಂತೆ ರಾಶಿರಾಶಿಯಾಗಿ ನುಗ್ಗಿ ಬಂದು ಕಣ್ಣಿಗೂ ಮುಖಕ್ಕೂ ಅಡರುತ್ತಿದ್ದ ಧೂಳು. ಅಂದು ರಾತ್ರಿ ವಿದ್ಯುಚ್ಛಕ್ತಿಯ ದೀಪಗಳು ಮಾತ್ರ ಅಲ್ಲಲ್ಲಿ ಮಿನುಗದೆ ಹೋಗಿದ್ದರೆ, ಒಟ್ಟು............ನಗರವೇ ಕತ್ತಲಿನಲ್ಲಿ ಅಂತರ್ಧಾನವಾದಂತೆ ತೋರುತ್ತಿದ್ದುದರಲ್ಲಿ ಸಂದೇಹವಿಲ್ಲ. ಆ ಸಮಯದಲ್ಲಿ ಅಚ್ಯುತರಾಯರು ಕಂಬಗಳಂತಿದ್ದ ತಮ್ಮ ಕಾಲುಗಳನ್ನು ಅತಿ ಕಷ್ಟದಿಂದ ಎತ್ತಿ ಎತ್ತಿ ಹಾಕುತ್ತ, ಎದುರುಗಾಳಿಗೆ ತಮ್ಮ ಸ್ಥೂಲ ದೇಹವನ್ನೊಡ್ಡಿ ತಮ್ಮ ಮನೆಯ ಕಡೆಗೆ ಹೋಗುತ್ತಿದ್ದರು. ಇನ್ನೇನು ಮಳೆ ಬೀಳುವುದರಲ್ಲಿದ್ದಿತು. ಆದಕಾರಣ, ಮಳೆಗೆ ಸಿಕ್ಕಬಾರದೆಂದು ಭಾವಿಸಿ ರಾಯರು ತಮ್ಮಿಂದ ಸಾಧ್ಯವಿದ್ದಷ್ಟು ಮಟ್ಟಿಗೂ ಬೇಗ ಬೇಗ ಮುಂದೆ ಸಾಗುತ್ತಿದ್ದರು. ಅವರು ತಮ್ಮ ಮನೆಯೊಳಕ್ಕೆ ಕಾಲಿಡುವ ಹೊತ್ತಿಗೂ ದಬದಬನೆ ಮಳೆ ಬೀಳುವ ಹೊತ್ತಿಗೂ ಸರಿಹೋಯಿತು. ಅವರ ಹೆಂಡತಿ ವೆಂಕಮ್ಮನವರು ನಡುಮನೆಯಲ್ಲಿ ನಿಂತು ಅದೇ ಕ್ಷಣದಲ್ಲಿ, "ಯಾವ ಸೀಮೆಯ ಧೊರೆಯ ಆಸ್ಥಾನಕ್ಕೆ ಈ ಅಮಾವಾಸ್ಯೆ ರಾತ್ರಿಯಲ್ಲಿ ರಾಯಸ ಹೋಗಬೇಕಾಗಿತ್ತೋ ಕಾಣೆ! ಇಷ್ಟು ಹೊತ್ತಿನಲ್ಲಿ ಕಾಗದ ಬರೆದುಕೊಂಡು, 'ಕಾಗದ ಎಲ್ಲಿಗೆ ?' ಎಂತ

ನಾನು ಕೇಳುತ್ತಿದ್ದರೂ ಉತ್ತರವೇ ಇಲ್ಲದೆ, ಮಳೆ ಬರೋ ಹಾಗಿದ್ದರೂ ಲಕ್ಷ್ಯವೇ ಇಲ್ಲದೆ, ಕಾಗದ ಅಂಚೆಗೆ ಹಾಕಿ ಏದುತ್ತಾ ಓಡಿಬಂದಿದ್ದೀರಿ" ಎಂದರು. ರಾಯರು, "ಅಯ್ಯೋ! ಕಾಗದ ಎಲ್ಲಿಗೇಂತ ನೀನು ಕೇಳಿದ ಮಾತು ನನ್ನ ಕಿವಿಗೆ ಬೀಳಲಿಲ್ಲ" ಎಂದರು. ವೆಂಕಮ್ಮನವರು ಅಳುತ್ತ, "ನಾನೂ ಒಂದು ಪದಾರ್ಥವೆಂದು ನೀವು ಭಾವಿಸಿದ್ದರೆ ತಾನೇ, ನಾನು ಆಡಿದ ಮಾತು ನಿಮಗೆ ಕೇಳಿಸೀತು! ನಾನು ಕಸಕ್ಕಿಂತಲೂ ಕಡೆ. ನನ್ನ ಕಂಡರೇ ನಿಮಗೆ ಅಲಕ್ಷ್ಯ" ಎಂದರು. ರಾಯರು ಒಂದು ಸಲ ವೆಂಕಮ್ಮನವರ ಕಡೆಗೆ ನೋಡಿದರು; ಮತ್ತೊಂದು ಸಲ [ಅದೇ ತಾನೆ ತಾವು ಮುಚ್ಚಿದ್ದ ಬಾಗಿಲನ್ನು ಓರೆಮಾಡಿ] ಮನೆಯಿಂದ ಹೊರಗೆ ದೃಷ್ಟಿಸಿ ನೋಡಿ ಮತ್ತೆ ಬಾಗಿಲನ್ನು ಮುಚ್ಚಿ ನಕ್ಕುಬಿಟ್ಟರು. ಹೊರಗೆ ಮಳೆಯೂ ಹೆಚ್ಚಾಯಿತು; ಗಂಡನಿಗೆ ತನ್ನಲ್ಲಿ ಅಪಹಾಸ್ಯವೆಂಬ ಭಾವನೆಯಿಂದ ಒಳಗೆ ವೆಂಕಮ್ಮನವರ ಅಳುವೂ ಹೆಚ್ಚಾಯಿತು. ರಾಯರು ಬಹಳ ಹೊತ್ತು ಸಮಾಧಾನ ಹೇಳಿ ವೆಂಕಮ್ಮನವರನ್ನು ಸಂತೈಸಿದ ಮೇಲೆ, "ಹುಚ್ಚಿ! ನಾನು ಅಲಕ್ಷ್ಯಮಾಡಿಯೂ ನಗಲಿಲ್ಲ. ಅಪಹಾಸ್ಯಕ್ಕೂ ನಗಲಿಲ್ಲ. ನಾನು ಹೊರಟಾಗ ನೀನು ಒಳಗೆ ಗಡಾವಣೆಮಾಡಿ ಬಹಳ ಹೊತ್ತಿನಿಂದ ಆಗಾಗ ಹೊಸ ಸೀರೆಯ ಮಾತನ್ನೆತ್ತಿ ಗುಡುಗುತ್ತಿದ್ದೆ. ಹೊರಗೆ ಮೋಡವೂ ಗುಡುಗುತ್ತಿತ್ತು. ನಾನು ಮನೆಯೊಳಕ್ಕೆ ಬಂದ ಮರುಕ್ಷಣದಲ್ಲಿ ಹೊರಗೂ ಮಳೆ. ನಿನ್ನ ಕಣ್ಣುಗಳಿಂದಲೂ ಸೋನೆ. ಮನೇ ಒಳಗೂ, ಮನೆ ಹೊರಗೂ ಒಂದೇ ಸಮವಾಗಿದೆಯೆಂದುಕೊಂಡೆ. ತಡೆಯಲಾರದಷ್ಟು ನಗು ಬಂತು. ನಕ್ಕುಬಿಟ್ಟೆ" ಎಂದರು.

"ನಗುವೊಂದೇ ನಿಮಗೆ ತಿಳಿಯುವುದು ನಗುವಂತೆ ನಗು!"

"ನಮ್ಮಂಥ ಬಡವರಿಗಿರುವುದು ನಗುವೊಂದೇ; ಅದೇ ನಮ್ಮ ಭಾಗ್ಯ. ಅದೂ ಹೋದ ಮೇಲೆ ನಮ್ಮ ಗತಿ?"

"ಕಾಲಾ, ಸಮಯಾ, ಒಂದೂ ನೋಡದೆ ಕಿಸಿಕಿಸೀ ಅಂತಿದ್ದರೆ ಸರಿ."

“ಹಾಗೆಲ್ಲಾ ಯೋಚನೆಗೆ ಹೊರಟರೆ ನಗುವಾದರೂ ನಮಗೆ ಬಂದೀತೆ ?”

“ಇಷ್ಟಕ್ಕೂ ಗಡಾವಣೆ ಮಾಡಿ ಗುಡುಗುವವಳಿಗೆ ಅದೆಲ್ಲಾ ತಿಳಿದೀತೆ! ಹೋಗಲಿ, ಬಿಡಿ. ನನ್ನ ಮಾತ್ರ ನಿಷ್ಕೃತ ಮಾಡ್ತೀರಿ. ನಾನು ಹೇಳಿದ್ದರಲ್ಲಿ ತಪ್ಪೇನು ? ಎಷ್ಟು ತಪ್ಪು ? ಅದಾದ್ರೂ ಹೇಳಿ.”

“ನೀನು ಹೇಳಿದ್ದರಲ್ಲಿ ಪೂರ್ತಿ ತಪ್ಪು. ನೆರಮನೆಯವರು ಊರಿಂದೂರಿಗೆ ಸುತ್ತಿ, ‘ಟ್ರಾವೆಲಿಂಗ್ ಅಲೋಯೆನ್ಸ್’ ತಂದರೆ ನನ್ನೂ ತಾ ಅಂದರೆ ನಾನೆಲ್ಲಿ ತರಲಿ ? ನೀನು ‘ಅಲೋಯೆನ್ಸ್’ ರಗಳೆ ತೆಗೆದರೆ ನಾನೇನು ಮಾಡಲಿ ?”

“ಅದೆಲ್ಲಾ ನಾನು ಕಾಣೆ. ವರಲಕ್ಷ್ಮೀ ಹಬ್ಬ ಓಡಿಬರ್ತಾ ಇದೆ. ಹಬ್ಬದ ಹೊತ್ತಿಗೆ ನನಗೆ ಹೊಸ ಸೀರೆ ಜೇಕೇ ಬೇಕು. ನೀವು ಸಾಲಾ ತೀರಿಸೋಕೆ ಪ್ರತಿತಿಂಗಳೂ ಹಣ ಕೊಡ್ತಿದ್ದೀರಿ. ನಾನು ಬಲ್ಲೆ. ಸಂಬಳದ ಹಣ ಸಾಲದು. ನಾನು ಬಲ್ಲೆ. ಆದ್ದರಿಂದ ‘ಅಲೋಯೆನ್ಸ್’ ತರೋದೊಂದೇ ಅದಕ್ಕೆ ದಾರಿ. ನೀವೂ ನೆರೆಮನೆ ಶಾಮರಾಯರ ಹಾಗೇ ಊರಿಂದ ಊರಿಗೆ ಸುತ್ತಿ ‘ಅಲೋಯೆನ್ಸ್’ ತರಬಾರದೆ ?”

“ನಮ್ಮ ಸಾಹೇಬರಿಗೇ ಸಂಚಾರವಿಲ್ಲ. ಇನ್ನು ನನಗೆಲ್ಲೀ ಸಂಚಾರ ? ಅವರಿಗೇ ‘ಟ್ರಾವೆಲಿಂಗ್ ಅಲೋಯೆನ್ಸ್’ ಇಲ್ಲ. ಇನ್ನು ನನಗೆಲ್ಲೀ ‘ಅಲೋಯೆನ್ಸ್’? ಅದಾವರೂ ಹೇಳೇ ಮಹರಾಯಗಿತ್ತಿ !”

“ನಿಮ್ಮ ಸಾಹೇಬರಿಗೇಕೆ ಆ ಅಲೋಯೆನ್ಸ್ ಬರೋದಿಲ್ಲ ?”

“ನಮ್ಮ ಸಾಹೇಬರದು ಪ್ರಿನ್ಸಿಪಾಲ್ ಹುದ್ದೆ. ಕಾಲೇಜಿನಲ್ಲಿ ಕೂತ ಕಡೆ ಪಾಠ ಹೇಳುವ ಕೆಲಸ. ಊರಿಂದೂರಿಗೆ ಸುತ್ತುವ ಕೆಲಸವಲ್ಲ.”

“ಸುತ್ತುವ ಕೆಲಸವಿಲ್ಲದವರಿಗೂ ತಿಂಗಳಿಗೆ ಐವತ್ತು ರೂಪಾಯಿ ‘ಅಲೋಯೆನ್ಸ್’ ಬರ್ತಾ ಇದೆ. ನೀವೇ ಅವೊತ್ತು—ಅದೆಂಥಾದ್ದೋ ಲಿಸ್ಟೋ ಪಸ್ಟೋ ಏನೋ ಅಂದಿರಿ, ನೋಡಿ—ಅದೇ ಆ ಬಾದಾಮಿ ರಟ್ಟಿನ ಇಂಗ್ಲಿಷ್ ಪುಸ್ತಕ, ಆ ಪುಸ್ತಕದಲ್ಲಿ ತೋರಿಸಿ ನೀವೇ ಓದಿ ಹೇಳಿದಿರಿ.”

"ಬಾದಾಮೀ ರಟ್ಟೋ, ದ್ರಾಕ್ಷೀ ರಟ್ಟೋ! ಆ 'ಸಿವಿಲ್ ಲಿಸ್ಟ್' ಪುಸ್ತಕ ನಿನಗೆ ಓದಿ ಹೇಳಿದ್ದೇ ನನಗೆ ಗ್ರಹಚಾರ ವಕ್ಕರಿಸಿಬಿಟ್ಟಿದೆ. ನಿನಗೋ ಒಂದೂ ಸರಿಯಾಗಿ ತಿಳಿಯದು."

"ಹೌದು, ಹೌದು! ಅದೇ, ಅದೇ; 'ಸಿವಿಲ್ ಲಿಸ್ಟ್' ಪುಸ್ತಕ! ಅನೇಕರಿಗೆ ತಿಂಗಳಿಗೆ ಐವತ್ತು ರೂಪಾಯಿ ಅಲೋಯೆನ್ಸ್ ಅಂತ ಅದರಲ್ಲೇ ಬರೆದಿದೆ. ಅವರದೂ ನಿಮ್ಮ ಹಾಗೇ ಬರೀ ಬರೆವಣಿಗೆ ಕೆಲಸ. ಅವರ ಹಾಗೇ ನೀವು 'ಅಲೋಯೆನ್ಸ್' ಏಕೆ ತರಕೂಡದು?"

"ಭೇಷ್, ಭೇಷ್, ಇದೂ ಸರಿ. ಅವರೆಲ್ಲಾ 'ಸಿವಿಲ್ ಸರ್ವಿಸ್' ಪರೀಕ್ಷೆ ಮಾಡಿ ಅಸಿಸ್ಟೆಂಟ್ ಕಮೀಷನರ್ ಕೆಲಸ ಹೊಡೆದವರು. ಅವರೆಲ್ಲಿ, ನಾನೆಲ್ಲಿ? ತಿಳಿಯಿತೇನು? ಅವರ ಕೆಲಸಕ್ಕೆ 'ಅಲೋಯೆನ್ಸ್' ಇದೆ. ಆ ಅದೃಷ್ಟ ಗುಮಾಸ್ತರಾದ ನಮಗೆಲ್ಲಿ? ಅವರವರು ಕೇಳಿಕೊಂಡು ಬಂದ ಫಲ ಅವರವರದು."

"ಇವೊತ್ತು ಆಕಾಶಕ್ಕೆ ಮೋಡಮುಚ್ಚಿಕೊಂಡ ಹಾಗೆ ನಿಮ್ಮ ಮನಸ್ಸಿಗೆ ಮಂಕು ಮುಚ್ಚಿಕೊಂಡು ಬಿಟ್ಟಿದೆ. ಇದೆಲ್ಲಾ ಹೋಗಲಿ. ನಿಮ್ಮನ್ನ ಇನ್ನೊಂದು ಮಾತು ಕೇಳಲೆ?"

"ಅಗತ್ಯವಾಗಿ ಕೇಳು. ಹೊರಗೂ ಗುಡುಗು ನಿಂತಿದೆ. ಮನೆಯಲ್ಲೂ ಗುಡುಗು ಬೇಡ. ಶಾಂತವಾಗಿ ಏನು ಬೇಕಾದರೂ ಕೇಳು; ನೀನು ಗುಡುಗದೆ ಇದ್ದರೆ ಸಾಕು."

"ನಿನ್ನೆ ಅದೇ ಬಾದಾಮಿರಟ್ಟಿನ ಪುಸ್ತಕದಲ್ಲಿ ಇನ್ನೊಂದು 'ಅಲೋಯೆನ್ಸ್' ಓದಿ ಹೇಳಿದಿರಿ. ಊರಿಂದ ಊರಿಗೆ ಹೋಗದೆ ಒಂದೇ ಊರಿನಲ್ಲೇ ಇರೋರಿಗೆ ಸಂಚಾರದ ಭತ್ಯಕ್ಕೆ ಎಂಥಾದ್ದೋ 'ಅಲೋಯೆನ್ಸ್' ಕೊಡ್ತಾರೇ ಅಂತ. ಯಾವುದು ಆ ಮಾತು? ನನಗೋ ಅಧ್ವಾನದ ಮರವು. ಆ ಇಂಗ್ಲಿಷ್ ಮಾತು ಜ್ಞಾಪಕವಿಲ್ಲ."

"ಸರಿ. 'ಕನ್ವೇಯನ್ಸ್ ಅಲೋಯೆನ್ಸ್'; ಅದೇ ತಾನೇ ನಿನಗೆ ಜ್ಞಾಪಕವಿಲ್ಲದ ಮಾತು?"

"ಹೌದು. ಅದೇ, ಅದೇ! ಅದನ್ನೇ ನೀವೂ ತನ್ನಿ."

"ಅದು ಮೋಟಾರ್ ಕಾರ್ ಇಟ್ಟಿರೋರಿಗೆ ಬರುವ ಅಲೋಯೆನ್ಸ್."

"ಅಯ್ಯೋ ರಾಮು! ನೀವು ಅವಸರಕ್ಕೆ ಬೇಗಬೇಗ ಬಕಬಕಾ ಅಂತ ಬಿಸಿಬಿಸೀ ಅನ್ನಾ ತಿಂದು, ಬಿಸಿಲಿನಲ್ಲಿ ಓ ಲಕ್ಷ್ಮಣಾ ಅಂತ ಕಾಲೇಜಿಗೆ ನಡೆದು ಹೋಗಬೇಡವೆ? ಕಾಲು ಚಾಚಿಕೊಂಡು ಕಾರಿನಲ್ಲಿ ಕೂತು ತಿರುಗಿದವರಿಗೇ ಕೊಡಬಹುದಂತೆ. ಬಿಸಿಲು ಬಾಳೇಹಣ್ಣು ತಿಂದು ಮಳೇ ಗಂಗಾಭವಾನಿಯಲ್ಲಿ ಮುಳುಗಿ ತೇಲಿ, ಒದ್ದೆಯ ಬಟ್ಟೆ ಒಣಗುವವರೆಗೂ ನಡಗೋರಿಗೆ ಆ ಅಲೋಯೆನ್ಸ್ ಕೊಡಕೂಡದೆ? ಇಷ್ಟಕ್ಕೂ ನೀವು ಧೈರ್ಯ ಮಾಡಿ ಕೇಳಿದರೆ ತಾನೆ ಅವರು ಕೊಟ್ಟಾರು! ನಿಮ್ಮ ಪ್ರತಾಪವೆಲ್ಲಾ ನನ್ನ ಮುಂದೇ."

"ಕೇಳಬೇಕಾದರೂ ಕಾರಣವಿರಬೇಕು. 'ಅಲೋಯನ್ಸ್' ಕೊಡುವುದಕ್ಕೂ ರೀತಿ, ನೀತಿ, ನ್ಯಾಯ, ನಿಬಂಧನೆ—ಎಲ್ಲಾ ಇದೆ. ನಾನು ಕೇಳಿದ ಮಾತ್ರಕ್ಕೇ ಅದು ಬರುವ ಹಾಗಿಲ್ಲ. ನನ್ನಂಥ ಗುಮಾಸ್ತರಿಗೆಲ್ಲಾ 'ಅಲೋಯೆನ್ಸ್' ಕೊಡುವುದಕ್ಕಾದೀತೆ?"

ಕೇಳುವುದು ಕೇಳಿಬಿಡಿ. ಕೊಟ್ಟರೆ ಸಂತೋಷ. ಕೊಡದಿದ್ದರೆ ಹೋಗಲಿ. ನೀವೇ ತೀರ್ಮಾನ ಹೇಳಿಬಿಡಬೇಡಿ. ಮೇಲಿನವರನ್ನೂ ಕೇಳಿನೋಡಿ."

"ಕೊಡಿಸುವವನು ಭಗವಂತ. ನಮ್ಮದಾಗಿರುವುದು ನಮಗೆ ಬಂದೇ ಬರಬೇಕು. ನಾವೇಕೆ ಕೇಳಬೇಕು? 'ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ' ಎಂದು ದಾಸರು ಹೇಳಿಲ್ಲವೆ? ಹಾಗೆ ಭಗವಂತನನ್ನು ನಂಬಿ ಸುಮ್ಮನಿರುವುದನ್ನು ಬಿಟ್ಟು ಕೈಗೆ ಸಿಕ್ಕದ ಹಣ್ಣಿಗೆ, ತಿಳಿದು ತಿಳಿದೂ ಕೈಚಾಚುವುದು ಸರಿಯೆ? ಆಗುವ ಕೆಲಸಕ್ಕಾದರೆ ಪ್ರಯತ್ನ ಮಾಡಬಹುದು. ನನಗೆ 'ಅಲೋಯೆನ್ಸ್' ಕೊಡಲು ನ್ಯಾಯವಾದ ಕಾರಣವೇ ಇಲ್ಲ."

"ಅದೊಂದೂ ನನಗೆ ಬೇಡ. ನಿಮ್ಮದೆಲ್ಲಾ ಕೈಲಾಗದವರ ಒಣ ವೇದಾಂತ. 'ಮಣ್ಣು ಕಾಲು ನೀರಿಗಾಗದು, ಮರದ ಕಾಲು ಬೆಂಕಿ

ಗಾಗದು' ಎಂದ ಹಾಗೆ, ನನ್ನ ಮಾತು ನಿಮಗೆ ಸರಿಯಿಲ್ಲ; ನಿಮ್ಮ ಮಾತು ನನಗೆ ಸರಿಯಿಲ್ಲ. ಅದೆಲ್ಲಾ ಹೋಗಲಿ. ಹಬ್ಬದ ದಿನ ನಾನು ಕಾವೇರಮ್ಮ ನವರ ಮನೆಗೆ ಅರಿಸಿನ ಕುಂಕುಮಕ್ಕೆ ಹೋಗಬೇಕು. ಅವರನ್ನೂ ನಮ್ಮ ಮನೆಗೆ ಕರೆಯಬೇಕು. ನನಗೆ ಹೊಸ ಸೀರೆ ಬೇಕೇ ಬೇಕು.''

''ಹೊಸ ಸೀರೆ ಉಟ್ಟೇ ಬರಬೇಕೆಂತ ಕಾವೇರಮ್ಮನವರು ಹೇಳಿದ್ದಾರೇನು ?''

''ನಿಮಗೊಂದೂ ತಿಳಿಯದು. ನಾನು ಮಾಸಿದ ಹಳೇ ಸೀರೆ ಉಟ್ಟು ಕೊಂಡು ಅವರ ಮನೆಗೆ ಹೋದರೆ, ಮುಂದೆ ನಮ್ಮ ಸರಸೂನ ಅವರ ಮಗನಿಗೆ ತಂದುಕೊಂಡಾರೆ? ನಮಗೆ ಅವರಲ್ಲಿ ತೂಕ ಉಳಿದೀತೆ? ಅದಕ್ಕೋಸ್ಕರ ಸೀರೆ ಕೇಳಿದೆನೇ ಹೊರತು ನನಗೋಸ್ಕರ ಖಂಡಿತ ಅಲ್ಲ. ಆ ಪುಸ್ತಕದಲ್ಲಿ ಅಷ್ಟೊಂದು 'ಅಲೋೀಯೆನ್ಸ್'ಗಳು ಬರೆದಿವೆ. ನೀವೂ ಯಾವುದಾದ್ರೂ ಒಂದು ಅಲೋೀಯೆನ್ಸ್ ಕೇಳಲೇಬೇಕು; ಇಲ್ಲದೆ ಹೋದರೆ ನಿರ್ವಾಹವೇ ಇಲ್ಲ. ಅದಿರಲಿ. ನೀವು ಊಟ ಮಾಡಿ ಕೈ ತೊಳೆದುಕೊಂಡ ಕ್ಷಣದಲ್ಲೇ ಯಾರಿಗೋ ಕಾಗದ ಬರೆದು ಅಂಚೆಗೆ ಹಾಕಿಬಂದಿರಲ್ಲಾ! ಇಷ್ಟು ಅವೇಳೆ ಹೊತ್ತಿನಲ್ಲಿ ಯಾರಿಗೆ ನೀವು ಕಾಗದ ಬರೆದದ್ದು?''

''ಅದೆಲ್ಲಾ ನನ್ನ ಗುಟ್ಟು. ಅದರ ಸುದ್ದಿಗೆ ಮಾತ್ರ ನೀನು ಬರಬೇಡ. ಈಗಲೇ ಅದನ್ನೆಲ್ಲ ನಿನಗೆ ತಿಳಿಸುವ ಹಾಗಿಲ್ಲ.''

''ನಾನು ಮೊದಲೇ ಹೇಳಲಿಲ್ಲವೆ, ನಾನೊಂದು ಪದಾರ್ಥವೆಂದೇ ನೀವು ಭಾವಿಸಿಲ್ಲವೆಂತ. ನಾನೊಬ್ಬಳು ಅಡಿಗೆ ಹೆಂಗಸು. ನಿಮಗೂ ನಿಮ್ಮ ಮಕ್ಕಳಿಗೂ ಅಡಿಗೆ ಮಾಡಿ ದುಡಿಯುವ ಜೀತದ ಆಳು. ಸದ್ಯ ಮಕ್ಕಳೆಲ್ಲಾ ಮಲಗಿವೆ. ಅವಕ್ಕೆ ನಿದ್ದೆ ಬಂದಿದೆ. ನಮ್ಮ ವ್ಯಾಜ್ಯ ಮಕ್ಕಳ ಕಿವಿಗೆ ಬಿದ್ದಿದ್ದರೆ ನಾಚಿಕೆಕೇಡು. ನಿಮ್ಮ ಗುಟ್ಟು ನೀವೇ ಇಟ್ಟುಕೊಳ್ಳಿ. ಗುಟ್ಟಂತೆ, ಗುಟ್ಟು.''

ತಮ್ಮ ಮಾತುಗಳು ಮುಗಿದೊಡನೆಯೇ ವೆಂಕಮ್ಮನವರು ಅಸಮಾ ಧಾನದಿಂದ ಅಡಿಗೆಯ ಮನೆಗೆ ಹೊರಟುಹೋದರು. ಅಚ್ಯುತರಾಯರು ಒಂದೆರಡು ನಿಮಿಷಗಳ ಕಾಲ ಸುಮ್ಮನೆ ನಿಂತಿದ್ದು ತಮ್ಮ ಕೊಟಡಿ

ಯೊಳಕ್ಕೆ ಹೋದರು. ಮೇಜಿನ ಮೇಲಿದ್ದ "ಸಿವಿಲ್‌ಲಿಸ್ಟ್" ಪುಸ್ತಕವನ್ನು ಕೆಳಕ್ಕೆಸೆದು "ಈ ಹಾಳು ಪುಸ್ತಕ ಮನೆಗೆ ತಂದು ಓದಿ ಹೇಳಬಾರದಾಗಿತ್ತು. ಇದರಿಂದಲೇ ಈ 'ಅಲೋಯೆನ್ಸ್' ರಗಳೆ". ಎಂದು ಗೊಣಗಿಕೊಂಡು, ಹಾಸಿಗೆಯನ್ನುರುಳಿಸಿಕೊಂಡು ದೀಪವನ್ನಾರಿಸಿ ಮಲಗಿಕೊಂಡರು.

೨

ಬೆಳಗಾಯಿತು. ವೆಂಕಮ್ಮನವರ ಮನಸ್ಸು ಇನ್ನೂ ಶಾಂತವಾಗಿರಲಿಲ್ಲ. ಕಾಫಿಯ ಸವಾರಿ ಬರುವುದು ಎಂದಿಗಿಂತಲೂ ತಡವಾದುದರಿಂದಲೇ ಅಚ್ಯುತರಾಯರಿಗೂ ಅದು ಗೊತ್ತು. ಏನೇ ಆಗಲಿ, ತಮ್ಮ ಪಾಲಿನ ಕಾಫಿಗೆ ಸೊನ್ನೆಯೇನೂ ಬೀಳಲಾರದೆಂಬ ಭರವಸೆಯೂ ಅವರಿಗುಂಟು. ಆದರೂ, ತಾವು ಮನೆಯಲ್ಲಿರುವುದು ವೆಂಕಮ್ಮನವರಿಗೆ ಮರೆತು ಹೋಗದಿರಲೆಂಬ ಭಾವನೆಯಿಂದಲೋ ಏನೋ, ಅವರು ಹುಸಿಕೆಮ್ಮಿನ ಧ್ವನಿಯಿಂದ ಆಗಾಗ ಸೂಚನೆ ಕೊಡುತ್ತಿದ್ದರು: ಕೊನೆಗೆ ಸ್ವಲ್ಪ ಹೊತ್ತಿನ ಮೇಲೆ ವೆಂಕಮ್ಮನವರು--ಎಂದಿನಂತೆ ತಾವೇ ಕಾಫಿಯನ್ನು ತಂದುಕೊಡದೆ—ಅಡಿಗೆ ಮನೆಯಿಂದಲೇ "ಲೇ ಸರಸೂ, ನಿಮ್ಮ ತಂದೆಯವರಿಗೆ ಕಾಫೀ ಕೊಟ್ಟುಬಾರೆ" ಎಂದು ಗಟ್ಟಿಯಾಗಿ ಕೂಗಿ ಹೇಳಿ ಕಳುಹಿಸಿದರು. ವೆಂಕಮ್ಮನವರ ಮಾತು ಕೆಲವು ವೇಳೆ ದುಡುಕಾದರೂ, ಮನಸ್ಸು ಮಾತ್ರ ಯಾವಾಗಲೂ ಬಹಳ ಮೃದು. ಎಂದಿನಂತೆ ತಾವು ಕಾಫಿಯನ್ನು ತಂದು ಕೊಡದೆ ತಪ್ಪಿದುದೇ ಒಂದು ದೊಡ್ಡ ಅಪರಾಧವೆಂಬ ಭಾವನೆಯಿಂದ ಅವರು ತಳಮಳಗೊಂಡರು; ಅಲ್ಲದೆ, ಮಗಳನ್ನೇ ಹಿಂಬಾಲಿಸಿ ಬಂದು ನಡುಮನೆಯಲ್ಲಿ ನಿಂತಿದ್ದರು. ರಾಯರು ಕಾಫಿಯನ್ನು ಕುಡಿದು, "ಸರಸೂ, ಕಾಫಿ ಬಹಳ ಭೇಷಾಗಿದೆ; ನಿಮ್ಮ ತಾಯಿಗೆ ಹೇಳಮ್ಮ. ಇವೊತ್ತು ಶನಿವಾರ; ಬಾಕಿಬಿದ್ದಿರುವ ಕೆಲಸವನ್ನು ಕರಗಿಸಬೇಕು. ಕಾಲೇಜಿಗೆ ಹೋಗಬೇಕು. ಎಷ್ಟು ಬೇಗ ಅಡಿಗೆಯಾದರೆ ಅಷ್ಟು ಅನುಕೂಲವೆಂತಲೂ ನಿಮ್ಮ ತಾಯಿಗೆ

ತಿಳಿಸಿಬಿಡಮ್ಮ'' ಎಂದರು. ವೆಂಕಮ್ಮನವರ ಅಸಮಾಧಾನ ಎಲ್ಲಿಗೆ ಓಡಿತೊ! ಅವರು ಒಡನೆಯೆ ''ಅಲ್ಲಾ, ಶನಿವಾರ ಭಾನುವಾರ ಹುಡುಗರಿಗೆ ಕೂಡ ಕಾಲೇಜಿಲ್ಲ. ನೀವೇಕೆ ಹೀಗೆ ದೇಹ ತೆಯ್ದು ತೆಯ್ದು ಸವೆಸ ಬೇಕೋ ಕಾಣೆ" ಎಂದು ಹೇಳುತ್ತ ಒಳಗೆ ಬಂದರು. ರಾಯರು ನಗುತ್ತಾ, ''ನಮ್ಮ ಕಾಲೇಜು ಸರಸ್ವತಿಯ ದೇವಸ್ಥಾನ. ನಾವೆಲ್ಲರೂ ಅಲ್ಲಿ ನಂದಾ ದೀಪಗಳು. ನಾನೊಂದು ಸಣ್ಣ ದೀಪ. ಆದಷ್ಟು ದುಡಿಯುವುದು ನನ್ನ ಕೆಲಸ. ನನ್ನ ದೇಹ ಸವೆಯುವುದೂ ಉಂಟೆ. ದೇವರು ಮಜಬೂತಾದ ದೇಹ ಕೊಟ್ಟಿದ್ದಾನೆ. ದಿನದಿನಕ್ಕೂ ದಪ್ಪವಾಗುತ್ತಲಿದ್ದೇನೆ. ಜೀರ್ಣಶಕ್ತಿ ಯಲ್ಲಂತೂ, ಭೀಮಸೇನನ ಅಂಶವೇ'' ಎಂದು ಉತ್ತರ ಹೇಳಿದರು. ವೆಂಕಮ್ಮನವರು ''ದಪ್ಪದೃಢವಾಗಿರುವುದೂ ಒಂದು ಪುಣ್ಯ. ನನ್ನ ಅದೃಷ್ಟದಿಂದ ಹೀಗೇ ಇರಿ. ಆದರೆ ತಲೆ ಬಲವಾಗಿದೆಯೆಂತ ಕಲ್ಲು ಹಾಯ ಬೇಕೇನು? ರಜದ ದಿನವೂ ಹಾಯಾಗಿ ಮನೆಯಲ್ಲಿರದೆ ದುಡಿದರೆ ಯಾವ ದೇವರಿಗೆ ಪ್ರೀತಿ? ನಿಮಗೇನು 'ಅಲೋಯೆನ್ಸ್' ಕೊಡುತ್ತಾರೆಯೆ? ಇಷ್ಟಕ್ಕೂ ಅದರ ಮಾತೆಲ್ಲಾ ನನಗೇಕೆ?'' ಎಂದರು. ಶಾಂತಿಸ್ಥಾಪನೆಗೆ ತಕ್ಕ ಸಮಯವು ಅದೇ ಸರಿಯೆಂದು ರಾಯರಿಗೆ ತೋರಿತು. ಅವರು ಒಡನೆಯೇ ''ರಾತ್ರಿಯೇ ಬಹಳ ಹೊತ್ತು ಯೋಚನೆಮಾಡಿ ನಿರ್ಧರಿಸಿಬಿಟ್ಟೆ. ನನಗೆ ಕೊಡಬಹುದಾದ 'ಅಲೋಯೆನ್ಸ್' ಒಂದಿದೆ. ಅದು ಬರುವುದೂ ಕಷ್ಟವೇ. ಆದರೂ ಅದನ್ನ ನನಗೆ ಕೊಡಿಸಬೇಕೆಂತ ನಮ್ಮ ಸಾಹೇಬರನ್ನು ಇವೊತ್ತೇ ಕೇಳಿಬಿಡುತ್ತೇನೆ. ಅದು ನನಗೆ ಸಿಕ್ಕುವುದೂ ಬಿಡುವುದೂ ಭಗವಂತನ ಚಿತ್ತ'' ಎಂದರು. ವೆಂಕಮ್ಮನವರ ಮುಖವೇ ಅರಳಿ ಹೋಯಿತು. ಅವರು ''ನಾನು ಹೇಳುವುದೂ ಪಥ್ಯವಾಯಿತಲ್ಲಾ, ಹಾಗಾದರೆ? ಹೆಚ್ಚು ಓದು ಬರೆಹ ಬಾರದ ಹಳ್ಳಿಯವಳಾದರೂ ನನಗೂ ಬುದ್ಧಿ ಇದೆ. ರಾತ್ರಿಯೇ ಈ ಮಾತು ಹೇಳಿದ್ದರೆ, ನಾನು ಸುಖವಾಗಿ ನಿದ್ದೆ ಮಾಡುತ್ತಿದ್ದೆ' ಎಂದರು. ರಾಯರು ''ನಿನಗೊಂದು ಹೊಸ ಸೀರೆ ತಂದುಕೊಟ್ಟು ಸಂತೋಷಪಡಿಸುವ ಚೈತನ್ಯವಿಲ್ಲವಲ್ಲಾ ಎಂದು ಕೊರಗುತ್ತಾ

ನಾನು ಎಷ್ಟು ಹೊತ್ತು ಎಚ್ಚರವಾಗಿದ್ದೆನೋ ನೀನೇನು ಬಲ್ಲೆ ?'' ಎಂದರು.

ಅಚ್ಯುತರಾಯರು ಹನ್ನೊಂದು ಘಂಟೆಯ ವೇಳೆಗೇ ಕಾಲೇಜನ್ನು ಸೇರಿ ಶ್ರದ್ಧೆಯಿಂದ ಕೆಲಸ ಮಾಡತೊಡಗಿದರು. ಸಾಹೇಬರೆಂದರೆ ಅನೇಕರಿಗೆ ''ಸಿಂಹಸ್ವಪ್ನ.'' ಅವರಿಗೆ ಅಚ್ಚುಮೆಚ್ಚೆನಿಸಿದ್ದ ಭಾಗ್ಯವೇನೊ ಕೆಲವರಿಗೆ ಮಾತ್ರವೇ; ಆ ಕೆಲವರಲ್ಲಿ ಅಚ್ಯುತರಾಯರೂ ಒಬ್ಬರು. ಆದರೂ ಸಾಹೇಬರ ಮನಸ್ಸಿನ ''ಅಡಿ ಆಳವೇ'' ಅವರಿಗೂ ಗೊತ್ತಾಗಿರಲಿಲ್ಲ. ಎಲ್ಲರಂತೆಯೇ ಅವರಿಗೂ ''ಯಾವ ಸಮಯಕ್ಕೇನೋ'' ಎಂಬ ಭಯವೇ. ಇಷ್ಟಾದರೂ, ಸಾಹೇಬರು ಅನ್ಯಾಯ ಮಾಡಿದುದನ್ನಾಗಲಿ, ವಿನಯ ತಪ್ಪಿ ವರ್ತಿಸಿದುದನ್ನಾಗಲಿ ಯಾರೂ ಅರಿಯರು; ಆದರೆ ಅವರು ಅಪರಾಧಿಗಳನ್ನು ಶಿಕ್ಷಿಸದೆಯೂ ಬಿಡುತ್ತಿರಲಿಲ್ಲ; ಅವರು ತಮ್ಮ ಮೆಚ್ಚಿಕೆಗೆ ಪಾತ್ರರಾದವರನ್ನು ಸನ್ಮಾನಿಸಿ ತಮ್ಮ ಪ್ರೀತಿಯನ್ನು ಕಾರ್ಯತಃ ತೋರ್ಪಡಿಸದೆಯೂ ಸುಮ್ಮ ನಿರುತ್ತಿರಲಿಲ್ಲ. ಆದಕಾರಣ, ಸಾಹೇಬರನ್ನು ಕಂಡರೆ ಎಲ್ಲರಿಗೂ ಭಯ; ಭಯಕ್ಕಿಂತ ಹೆಚ್ಚಿನ ಭಕ್ತಿ ವಿಶ್ವಾಸಗಳು. ಪಾಠ ಹೇಳಿ ಜ್ಞಾನದಾನ ಮಾಡುವುದರಲ್ಲಿ ಅವರದು ಸಿದ್ಧಾನ್ತ. ಅರ್ಹರಾದ ವಿದ್ಯಾರ್ಥಿಗಳಿಗೆ ಸಹಾಯ ಮಾಡುವುದರಲ್ಲಿ ಅವರದು ಮುಕ್ತಹಸ್ತ.

ಸಾಹೇಬರ ಮನೆಗೆ ಟಪ್ಪಾಲನ್ನು ತೆಗೆದುಕೊಂಡು ಹೋಗಿದ್ದ ಮುನಿ ಸಾಮಿ. ''ಸಾಹೇಬ್ರು ಮನೇಲಿರಲಿಲ್ಲ, ಬುದ್ಧಿ. ಮಧ್ಯಾಹ್ನದ ಒಂದು ಘಂಟೆ ಊಟಕ್ಕೂ ಮನೆಗೆ ಬರೋದಿಲ್ವಂತೆ. ಬಟ್ಲರ್ ಹೇಳ್ದ, 'ಎಷ್ಟೊತ್ತಿಗೆ ಸಾಹೇಬ್ರು ಬರ್ತಾರೋ ತಿಳೀದು' ಅಂತ. ಅದ್ರೂನೂವೆ ಟಪ್ಪಾಲ್ ಅಲ್ಲೇ ಕೊಟ್ಬಂದೆ'' ಎಂದನು. ರಾಯರು, ''ಒಳ್ಳೇ ಸುದ್ದಿ ತಂದಿದ್ದೀಯೆ, ಮುನಿಸಾಮಿ. ಆಗಲೇ ಒಂದು ಘಂಟೆಯಾಗಿ ಹೋಯಿತು. ಇವೊತ್ತೇಕೋ ಬೇಗ ಬೇಗ ಕೆಲಸವೇ ಸಾಗಲಿಲ್ಲ. ಸಾಹೇಬರು ಬರುವ ಹೊತ್ತಿಗೆ ಕಾಗದ ಪತ್ರಗಳು ಸಿದ್ಧವಾಗುವುದಿಲ್ಲವಲ್ಲಾ ಅಂತ ಪೇಚಾಡುತ್ತಿದ್ದೆ. ಸಾಹೇಬರು ಇವೊತ್ತು ಪ್ರತಿ ಶನಿವಾರದಂತೆ ಮೂರು ಘಂಟೆಗೆ ಬರಲಾರರೆಂದು ತೋರುತ್ತೆ. ಇನ್ನೂ ಹೊತ್ತಾಗಿ ಬಂದಾರು. ನೀನು ಮಾಮೂಲಿನಂತೆ ಇಡ್ಲೀ ಕಾಫಿ

ಬರೋದಕ್ಕೆ ಬೇರ್ಸಿ ಕೊಟ್ಟು ಬಾ, ಬೇಗ ತರುವಂತೆ ಹೇಳಿ ಬಾ" ಎಂದರು. ಮುನಿಸಾಮಿ, "ಇಡ್ಲೀ ಅನ್ನುತ್ಲೂನೆ ಜ್ಞಾಪ್ತಿ ಬಂತು; ಮರೆತೇಬಿಟ್ಟಿದ್ದೆ. ಚಿಕ್ಕ ರೈಟರಿಗೆ ಏನೋ ಕೆಲಸವಂತೆ. ಹೊತ್ತಾಗಿ ಬರ್ತಾರಂತೆ. ಬಂದರೆ ಎಲ್ಡು ಗಂಟೇ ಹೊತ್ತಿಗೆ ಬರ್ತಾರಂತೆ. ಅವರಿಗೂ ಇಡ್ಲೀ ಮಾಮೂಲು ಮೇರೆಗೆ ತರಿಸಿರಬೇಕಂತೆ. ನಿಮ್ಗೆ ಕೈಯೆತ್ತಿ ಮುಗೀತೀನಿ, ಬುದ್ಧಿ. ಪ್ರತಿ ಶನಿವಾರಾನೂ ನನ್ಗೆ ನಿಮ್ಮ ಹಣದಾಗೇ ಇಡ್ಲೀ ಕಾಫೀ ಬರ್ತೈತೆ. ಪುಣ್ಣಾತ್ಮರು, ಬುದ್ಧಿ" ಎಂದನು. ರಾಯರು, "ತೆಗೆದೆಯಲ್ಲಾ, ನಿನ್ನ ಪುರಾಣ? ಇದೆಲ್ಲಾ ಬೇಡ. ಬೇಗ ಇಡ್ಲೀ ತರಹೇಳಿ ಬೇರ್ಸಿ ಕೊಟ್ಟ ಬಾ" ಎಂದರು. ಮುನಿಸಾಮಿ ಹೋದ ಕಡೆಗೇ ದೃಷ್ಟಿಸಿ ನೋಡಿ ನಸು ನಕ್ಕರು. ಬಹುಶಃ ಅವೊತ್ತು "ಚಿಕ್ಕ ರೈಟರು" ಬರಲಾರರೆಂದೂ, ಒಂದು ವೇಳೆ ಅವರು ಬರದೆ ಹೋದರೆ ಅವರಿಗಾಗಿ ತರಿಸಿದ ಇಡ್ಲಿಗಳೂ ತಮಗೇ ದೊರೆಯುವುವೆಂದೂ, ಆ ದಿನ ತಮಗೆ ಎಂದಿಗಿಂತಲೂ ಬಹಳ ಹಸಿವಾಗಿ ದ್ದುದರಿಂದ ಭಗವಂತನು ಅದಕ್ಕೆ ತಕ್ಕಹಾಗಿ ಅನುಕೂಲವನ್ನು ಕಲ್ಪಿಸಿದ್ದ ನೆಂದೂ ಅವರಿಗೆ ತೋರಿದುದೇ ಅದಕ್ಕೆ ಕಾರಣ. ಪ್ರತಿ ಶನಿವಾರವೂ ಕಾಲೇಜಿನ ಗುಮಾಸ್ತರುಗಳೂ "ಸ್ಟೋರುಕೀಪರು"ಗಳು ಮುಂತಾದವರೂ ಒಟ್ಟಿಗೆ ಸೇರಿ ಮನಸ್ಸಿಗೆ ತೃಪ್ತಿಯಾಗುವಂತೆ ಇಡ್ಲೀ ಕಾಫಿ ತೆಗೆದುಕೊಳ್ಳು ತ್ತಿದ್ದುದು ವಾಡಿಕೆ. ಕಾಲೇಜಿನ "ಹೆಡ್ ಕ್ಲಾರ್ಕ್" ಅಚ್ಯುತರಾಯರೇ ಅದರ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದರು. ಉಳಿದವರೆಲ್ಲರೂ ತಮ್ಮ ತಮ್ಮ ಇಡ್ಲೀ ಕಾಫಿ ವೆಚ್ಚವನ್ನು ಕೊಟ್ಟುಕೊಳ್ಳುತ್ತಿದ್ದರೆ, ರಾಯರು ಮಾತ್ರ ತಮ್ಮ ವೆಚ್ಚದ ಜೊತೆಗೆ ಜವಾನ ಮುನಿಸಾಮಿಯದನ್ನೂ ವಹಿಸು ತ್ತಿದ್ದರು. ಇತರರೂ ಮುನಿಸಾಮಿಯ ವೆಚ್ಚದಲ್ಲಿ ಒಂದೊಂದು ಭಾಗವನ್ನು ವಹಿಸುವುದಾಗಿ ಎಷ್ಟು ಸಲ ತಿಳಿಸಿದರೂ ರಾಯರು ಒಪ್ಪದೆ ತಮ್ಮ ಅಧಿಕಾರಕ್ಕೆ ಯಾರೂ ಕೈಹಾಕಬಾರದೆಂದು ಹೇಳುತ್ತಿದ್ದರು. ಈ ಇಡ್ಲೀ ಕಾಫಿ ಸಂತರ್ಪಣೆ ಪ್ರತಿ ಶನಿವಾರವೂ ಅಪರಾಹ್ನ ಎರಡೂಕಾಲು ಘಂಟೆಗೆ ಸರಿಯಾಗಿ ಪ್ರಾರಂಭವಾಗಿ ಎರಡೂ ಮುಕ್ಕಾಲು ಘಂಟೆಗಿಂತ ಮುಂಚಿತವಾಗಿ ಮುಗಿದುಹೋಗಬೇಕೆಂಬ ಶಿಸ್ತಿಗೆ ಎಲ್ಲರೂ ಸಮ್ಮತಿಸಿದ್ದರು. ಏಕೆಂದರೆ

ಮೂರು ಘಂಟೆಗೆ ಸರಿಯಾಗಿ ಸಾಹೇಬರು ಬರುತ್ತಿದ್ದರು. ಮೂವತ್ತೆರಡು ಇಡ್ಲಿಗಳಿಗೆ ಕಡಮೆಯಿಲ್ಲದೆ ಇಡ್ಲಿಗಳು ಬರುತ್ತಿದ್ದುವು.

ಇಡ್ಲೀ ಕಾಫಿ ಬರುವ ವೇಳೆಗೆ ಸರಿಯಾಗಿ ರಾಯರು ತಮ್ಮ ಅಂಗಿಯನ್ನು ಬಿಚ್ಚಿ ಅದನ್ನೂ ರುಮಾಲನ್ನೂ ದೂರವಾಗಿಟ್ಟರು. ಹಿಂದೆ ಒಂದು ದಿನ ಅಂಗಿಯ ಮೇಲೆ ಕಾಫಿ ಬಿದ್ದಿದ್ದುದೂ, ತಾವು ಚಟ್ನಿ ಮೆತ್ತಿಕೊಂಡಿದ್ದ ಕೈಬೆರಳುಗಳಿಂದ ರುಮಾಲು ಮುಟ್ಟಿಕೊಂಡಿದ್ದುದೂ ಅದಕ್ಕೆ ಕಾರಣ. ಪೂರ್ವ ಸಂಪ್ರದಾಯದವರಾದ ರಾಯರು 'ಕ್ರಾಪು' ಬಿಡದೆ ಶಿಖೆಯನ್ನು ಇಟ್ಟುಕೊಂಡಿದ್ದರು. ಹೊರವಾಗಿ ಬೆಳೆದಿದ್ದ ಅವರ ತಲೆಯ ಜುಟ್ಟು ಬೆನ್ನಿನ ಮಧ್ಯದವರೆಗೂ ಇಳಿದು ಹಾರಾಡುತ್ತಿದ್ದಿತು. ಆಗಿನ್ನೂ ಎರಡು ಘಂಟೆ. ಕಾಲೇಜು ಕಟ್ಟಡದ ಬೇರೆ ಬೇರೆ ಭಾಗಗಳಿಂದ "ಇಡ್ಲೀ ಪಟಾಲಂ" ಬಂದು ಸೇರಲು ಇನ್ನೂ ಹದಿನೈದು ನಿಮಿಷಗಳಿದ್ದುವು. ರಾಯರಿಗೆ ಹಸಿವು. ಮಾಣಿಯು ವಾಡಿಕೆಯಂತೆ ಇಡ್ಲೀ ಕಾಫಿಯನ್ನು ತಂದಿಟ್ಟು ಹೊರಟುಹೋದನು. ರಾಯರು "ಜೇರ್ಸಿ" ಒಳಗೆ ರಂಜಿಸುತ್ತಿದ್ದ ಇಡ್ಲಿಗಳಲ್ಲೊಂದನ್ನು ಮುರಿದು ಬಾಯೊಳಗೆ ಹಾಕಿಕೊಂಡು, ತಮ್ಮದೇ ಆದೊಂದು ತೃಪ್ತಿಯಿಂದ ಅದನ್ನು ಅಗಿಯುತ್ತ ಕುಳಿತರು; ಅಲ್ಲದೆ, ತಮ್ಮ ಮನಸ್ಸಿನಲ್ಲಿ ತಮಗೆ ಬರುವುದಕ್ಕೆ ಕಾರಣವಿಲ್ಲವೆಂದು ತೋರುತ್ತಿದ್ದ "ಅಲೋಯೆನ್ಸ್" ಕೊಡಿಸುವಂತೆ ಕೇಳುವುದೇ ಬಿಡುವುದೇ ಎಂದು ಮೂಡಿದ್ದ ಪ್ರಶ್ನೆಗೆ ಉತ್ತರವಾಗಿ "ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ......." ಎಂದು ಹಾಡಲು ಪ್ರಾರಂಭಿಸಿದ್ದರು. ರಾಯರು ಕುಳಿತಿದ್ದ ಕುರ್ಚಿಗೆ ಸ್ವಲ್ಪ ದೂರದಲ್ಲಿದ್ದ ಬಾಗಿಲಿನಿಂದ ಆ ಸಮಯಕ್ಕೆ ಸರಿಯಾಗಿ ಸಾಹೇಬರು ಬಂದುಬಿಟ್ಟರು. ಸಾಹೇಬರು ಎಂದೂ ಆ ಮಾರ್ಗವಾಗಿ ಬಂದಿರಲೂ ಇಲ್ಲ; ಅಂಗಿಯಿಲ್ಲದೆ, ರುಮಾಲಿಲ್ಲದೆ, ಜುಟ್ಟು ಬಿಟ್ಟುಕೊಂಡಿದ್ದ ಆಗಿನ ವೇಷದಲ್ಲಿ ರಾಯರನ್ನು ಹಿಂದೆ ಎಂದೂ ಅವರು ನೋಡಿರಲೂ ಇಲ್ಲ. ರಾಯರ ಮನಸ್ಸಿನ ಆಗಿನ ಸ್ಥಿತಿಯನ್ನು ಊಹಿಸಿಕೊಳ್ಳಬೇಕೇ ಹೊರತು, ವರ್ಣನೆಗೆ ಅದು ಸುತರಾಂ ಅಳವಲ್ಲ.

ಸಾಹೇಬರದು ಸಮುದ್ರ ಗಾಂಭೀರ್ಯ. ಅವರು ಕಷ್ಟದಿಂದ ನಗುವನ್ನು ತಡೆದುಕೊಂಡು ಒಂದೆರಡು ಕ್ಷಣಗಳ ಕಾಲ ಸುಮ್ಮನೆ ಸಿಂತುಬಿಟ್ಟರು. ಅವರ ದೃಷ್ಟಿಯು ಮೇಜಿನ ಮೇಲಿದ್ದ "ಬೇಸಿ಼ನ್" ಕಡೆಗೆ ಹೋಯಿತು. ಅದು ಸಾಹೇಬರ ಕೊಟಡಿಯಲ್ಲಿ ಕೈತೊಳೆದುಕೊಳ್ಳುವುದಕ್ಕಾಗಿ ಇಟ್ಟದ್ದ ಬಿಳಿಯ ಬಣ್ಣದ ಪಿಂಗಾಣಿ "ಬೇಸಿ಼ನ್'' [ಸಾಹೇಬರು ಅದನ್ನು ಎಂದೂ ಉಪ ಯೋಗಿಸಿರಲಿಲ್ಲವಾದ ಕಾರಣ, ರಾಯರು ಇಡ್ಲಿಗಳನ್ನು ತರಿಸುವ ಕೆಲಸ ಕ್ಕಾಗಿ ಅದನ್ನು ಬಳಸುತ್ತಿದ್ದರು. ಆದರೆ ಸಾಹೇಬರ ಅನುಮತಿಯನ್ನು ಪಡೆದಿರಲಿಲ್ಲ. ಅದು ಸಾಹೇಬರ ಗಮನಕ್ಕೆ ತರಬೇಕಾದಷ್ಟು ದೊಡ್ಡ ವಿಷಯವಾಗಿರಲಿಲ್ಲವೆಂಬ ಭಾವನೆಯೇ ಅವಕ್ಕೆ ಕಾರಣ.] ಸಾಹೇಬರು ಅದರ ಕಡೆಗೆ ಬೆರಳನ್ನು ತೋರಿಸಿ "ಇದೆಲ್ಲಿ ಹೋಯಿತೋ-ಎಂದು ಅಚ್ಚರಿಪಡುತ್ತಿದ್ದೆ. ಇದು ಇಲ್ಲಿದೆಯೇ?" ಎಂದು ಅರ್ಥವಾಗುವಂತೆ ಇಂಗ್ಲಿಷ್ ಭಾಷೆಯಲ್ಲಿ ಹೇಳಿದುದನ್ನು ಕೇಳಿ ರಾಯರ ಮನಸ್ಸು ತಲ್ಲಣಗೊಂಡಿತು. ರಾಯರು ಧಡಕ್ಕನೆ ಎದ್ದು ನಿಂತು, ದೂರದಲ್ಲಿದ್ದ ರುಮಾಲನ್ನು ತಲೆಗೆ ಧರಿಸಿದರು; ತಾವು ಅದನ್ನ ಹಿಂದುಮುಂದಾಗಿ ಧರಿಸಿದ್ದುದರ ಅರಿವೇ ಅವರಿಗಾಗಲಿಲ್ಲ. ರಾಯರು ಅಂಗಿಯನ್ನು ಧರಿಸುವಷ್ಟರಲ್ಲಿ ಸಾಹೇಬರು, ''ತೊಂದರೆಪಟ್ಟುಕೊಳ್ಳಬೇಡಿ'' ಎಂದಾಗಲೂ ಅವರು ತುಟಿ ಪಿಟಕ್ಕೆನ್ನಲಿಲ್ಲ. ಸಾಹೇಬರು ಇಡ್ಲಿಗಳ ಕಡೆಗೆ ಕೈತೋರಿಸಿ, ಅವುಗಳೇನೆಂದು ಕೇಳಿದಾಗ ಮಾತ್ರ, ರಾಯರು, "ಇಡ್ಲಿ, ಇಡ್ಲೀ, ಸಾ" ಎಂದು ಉತ್ತರ ಹೇಳಿದರು. ಸಾಹೇಬರು ಅಲ್ಲಿದ್ದ 'ಕೆಟಲ್' ಕಡೆಗೆ ಕೈತೋರಿಸಿದಾಗ ರಾಯರು ತಟಕ್ಕನೆ ''ಕಾಫೀ, ಕಾಫೀ, ಸಾ" ಎಂದರು. ಅಲ್ಲಿ ಎಷ್ಟು ಇಡ್ಲಿಗಳಿದ್ದುವೆಂದೂ, ಒಂದೊಂದು ಇಡ್ಲಿಯ ಬೆಲೆಯೆಷ್ಟೆಂದೂ ಸಾಹೇಬರು ಕೇಳಿದ ಪ್ರಶ್ನೆಗೆ, ರಾಯರು ಮೂವತ್ತೆರಡು ಇಡ್ಲಿಗಳಿದ್ದು ವೆಂದೂ, ಒಂದೊಂದ ಇಡ್ಲಿಯ ಬೆಲೆ ಆರು ಕಾಸೆಂದೂ, ಬೆಣ್ಣೆಗೂ ಪಲ್ಯಕ್ಕೂ ಬೇರೆ ಬೆಲೆಯೆಂದೂ ತಿಳಿಸಿದರು. ರಾಯರ ಮನಸ್ಸಿನ ಸ್ಥಿತಿಯನ್ನು ಗ್ರಹಿಸಿಯೋ ಏನೋ ಸಾಹೇಬರು ಲೋಕಾಭಿರಾಮವಾಗಿ ಕೆಲವು ಪ್ರಶ್ನೆ ಗಳನ್ನು ಕೇಳಿ, ಆ ದಿನ ಬೇರೆ ಕೆಲಸವಿದ್ದುದರಿಂದ ಮತ್ತೆ ಕಾಲೇಜಿಗೆ

ತಾವು ಬರುವುದಕ್ಕೆ ತೊಂದರೆಯೆಂದೂ, ರಾಯರು ವಿನೋದವಾಗಿ ಕಾಲ ಕಳೆಯುತ್ತಿದ್ದುದಕ್ಕೆ ತಮ್ಮಿಂದ ಅಡ್ಡಿಯಾದುದಕ್ಕೆ ಕ್ಷಮೆ ತೋರಬೇಕೆಂದೂ, ಇನ್ನು ಹೆಚ್ಚು ಕಾಲ ತಾವು ರಾಯರಿಗೆ ತೊಂದರೆ ಕೊಡುವವರಾಗಿರಲಿಲ್ಲ ವೆಂದೂ ತಿಳಿಸಿ, ['ಗುಡ್ ಆಫ್ಟರ್ನೂನ್' ಎಂದು ಹೇಳಿ] ತಾವೇ ಅಭಿವಂದಿಸಿ ತೆರಳಿದರು. ರಾಯರು ಸಾಹೇಬರಿಗೆ ಪ್ರತಿವಂದನೆಯನ್ನು ಕೂಡ ಸೂಚಿಸಲಿಲ್ಲ. ಆಗಿನ ಸ್ಥಿತಿಯಲ್ಲಿ ರಾಯರಿಗೆ ಏನೊಂದೂ ತೋರದೆ ಹೋಯಿತು. ತಮ್ಮ ಮೇಲೆ ಸಾಹೇಬರಿಗೆ ಬಹಳ ಕೋಪ ಬಂದಿದ್ದಿತೆಂದು ಅವರ ಮನಸ್ಸಿಗೆ ನಿರ್ಧರವಾಯಿತು. ಸಾಹೇಬರು "ಬೇರ್ಸಿ" ಸುದ್ದಿಯ ನ್ನೆತ್ತಿ ಆಡಿದ ಮಾತುಗಳನ್ನು ಸ್ಮರಿಸಿಕೊಂಡು, ರಾಯರಿಗೆ ಬಹಳ ಪಶ್ಚಾತ್ತಾಪವಾಯಿತು. "ಸಾಹೇಬರ ಅಪ್ಪಣೆ ಪಡೆಯದೆ ತಪ್ಪು ಮಾಡಿದೆ; ಮಣ್ಣು ತಿಂದೆ" ಎಂದು ರಾಯರು ತಮ್ಮನ್ನು ತಾವೇ ಹಳಿದುಕೊಂಡರು. ಸಾಹೇಬರು "ನಾನು ನಿಮಗೆ ಇನ್ನು ಹೆಚ್ಚು ಕಾಲ ತೊಂದರೆ ಮಾಡುವವ ನಾಗಿಲ್ಲ" ಎಂದು ಸೂಚಿಸಿದ್ದ ಮಾತುಗಳಿಂದ ಕೆಲವು ದಿವಸಗಳಲ್ಲೇ ತಮಗೆ ಕೆಲಸ ಹೋದರೂ ಹೋಗಬಹುದೆಂದು ನಿರ್ಧರಿಸಿದರು. ರಾಯರು ಬಗೆ ಬಗೆಯ ಭಾವನೆಗಳ ಗೊಂದಲದಲ್ಲಿ ಸಿಕ್ಕಿಬಿದ್ದು ಸ್ತಬ್ಧರಾಗಿ ನಿಂತು ಬಿಟ್ಟರು.

ಅವರು ಒಂದೆರಡು ನಿಮಿಷಗಳ ಕಾಲ ಹಾಗೆ ನಿಂತಿದ್ದರು. ಅಷ್ಟು ಹೊತ್ತಿಗೆ ಎರಡೂಕಾಲು ಘಂಟೆಯಾಯಿತು. "ಇಡ್ಲೀ ಪಟಾಲಂ" [ಅದು ರಾಯರೇ ಇಟ್ಟಿದ್ದ ಹೆಸರು] ಸೈನಿಕರೆಲ್ಲರೂ ಬಂದು ಸೇರಿದರು. "ಚಿಕ್ಕ ರೈಟರು" ಕೂಡ ಬಂದೇಬಿಟ್ಟರು. ತಮ್ಮ "ಸೇನಾನಿ"ಯವರಾದ ರಾಯರು ಕಲ್ಲುಬೊಂಬೆಯಂತೆ ನಿಂತಿದ್ದುದನ್ನು ಕಂಡು ಇತರರಂತೆಯೇ ಅವರೂ ಆಶ್ಚರ್ಯಪಟ್ಟು, "ನಾನು ಮುಂಚೆ ಬರುವುದಕ್ಕಾಗಲಿಲ್ಲ. ಟಿಫನ್ ಹೊತ್ತಿಗೇ ಬಂದುಬಿಟ್ಟೆ. ಕ್ಷಮಿಸಬೇಕು, ಸಾರ್. ನೀವೊಬ್ಬರೇ ಕೆಲಸ ಮಾಡಿದ್ದೀರಿ. ರುಮಾಲು ಹಿಂದುಮುಂದಾಗಿಟ್ಟುಕೊಂಡು ಹೀಗೇಕೆ ನಿಂತಿದ್ದೀರಿ, ಸಾರ್? ಜುಟ್ಟೇಕೆ ಕೆದರಿಕೊಂಡಿದ್ದೀರಿ, ಸಾರ್?" ಎಂದು ಕೇಳಿದರು. ಅಲ್ಲಿ ಸೇರಿದ್ದವರೊಬ್ಬರು, "ಅಂತು ಕಡುಬಿನ ಹೊತ್ತಿಗೆ ಪಿಡುಗಿನಂತೆ ಬಂದುಬಿಟ್ಟಿರಿ"

ಎಂದರು. ರಾಯರು ನಗುವಂತೆ ಮಾಡಬೇಕೆಂಬುದು ಅವರ ಉದ್ದೇಶ; ಅದು ಸಾರ್ಥಕವಾಗಲಿಲ್ಲ. ರಾಯರು "ದೇವರಂಥಾ ಮನುಸರು'' ಎಂದು ನಂಬಿದ್ದ ಮುನಿಸಾಮಿ "ಚಿಕ್ಕ ರೈಟರ್" ಸಂಗಡ "ಸಾಹೇಬ್ರು ಬಂದು ಹೊರಟೋದ್ರು. ಏನೇನೋ ಕೇಳ್ತಿದ್ರು. ಅನ್ಯಾಯವಾಗಿ ಏನಾದ್ರೂ ಆಡಿರ ಬಹುದೋ ಹೆಂಗೋ" ಎಂದು ಪಿಸುಗುಟ್ಟಿದೊಡನೆಯೆ ಅವರು "ಸಾಹೇಬರು ಏನಾದರೂ ಅಂದರೇ, ಸಾರ್?" ಎಂದು ಕೇಳಿದರು. ರಾಯರು, "ಏನೂ ಅನ್ನಲಿಲ್ಲ. ಇವೊತ್ತು ನನ್ನ ಕೆಲಸ ಮುಗಿದಿರಲಿಲ್ಲ, ನೋಡಿ. ಬಹುಶಃ ಬಹುಶಃ ಅದಕ್ಕೆ ಅವರಿಗೆ........" ಎನ್ನುವಷ್ಟರಲ್ಲಿಯೇ "ಚಿಕ್ಕ ರೈಟರು" ರಾಯರ ಮುಂದೆ ಬಂದು ನಿಂತು, "ಅವರನ್ನು ಮೂರಕ್ಕೆ ಮುಂಚೆ ಇಲ್ಲಿಗೆ ಬರಹೇಳಿದ್ದವರು ಯಾರಂತೆ? ಮೂರು ಘಂಟೆಗೆ ಬರದೆ ಎರಡು ಘಂಟೆಗೇ ಬಂದರೆ ಯಾರಂತೆ ಹೊಣೆ? ನಾನೂ ಇವೊತ್ತು ಬೇಗ ಬರಲಿಲ್ಲ. ಅದೂ ಒಂದು ಕಾರಣ. ಹೋಗಲಿ ಬಿಡಿ, ಸಾರ್. ಇಡ್ಲೀ ತಿಂದು ಕಾಫೀ ಕುಡಿದು, ತೇಗು ಹಾಕಿ ಕೂತಾ ಅಂದರೆ, ಅರಸೀಕೆರೆಯಲ್ಲಿ ಕಲ್ಲಿದ್ದಲೂ ನೀರೂ ತುಂಬಿಕೊಂಡು ರಭಸದಿಂದ ಹೊರಡೋ ಇಂಜಿ‌ ಹಾಗೆ ಸರಸರನೆ ಕೆಲಸಾ ಎಲ್ಲಾ ಎಳೆದುಹಾಕಿಬಿಟ್ಟು ಮನೆಗೆ ಹೋಗೋಣ. ಸೋಮವಾರ ಅವರೇ ಬಂದು ನೋಡಿ ಹಿಗ್ಗಿ ಹೋಗ್ತಾರೆ'' ಎಂದರು. ಅದನ್ನು ಕೇಳಿ ರಾಯರಿಗೆ ಆಗಿನ ಸ್ಥಿತಿಯಲ್ಲಿ ಕೂಡ ನಗು ಬಂದಿತು. ಅದನ್ನು ನೋಡಿ ಇತರರೂ ನಕ್ಕರು.

೩

ಆ ದಿನ ರಾತ್ರಿ ಅಚ್ಯುತರಾಯರಿಗೆ ಊಟವೇ ರುಚಿಸಲಿಲ್ಲ. ಅವರು ಮನೆಗೆ ಹೋದಾಗಿನಿಂದಲೂ ಚಿಂತಾಕ್ರಾಂತರಾಗಿದ್ದರು. ಅವರನ್ನು ಕಂಡೊಡನೆಯೆ ವೆಂಕಮ್ಮನವರು ಸಂತೋಷದಿಂದ "ಅಲೋಯೆನ್ಸ್ ಕೇಳಿದಿರಾ?" ಎಂದರು. ರಾಯರು ನಿಟ್ಟುಸಿರುಬಿಟ್ಟುದನ್ನು ನೋಡಿ, "ಮುಖವೆಲ್ಲಾ ಹುಚ್ಚುಹುಚ್ಚಾಗಿದೆ. ಏಕೆ ಹೀಗಿದ್ದೀರಿ? ಏನಾಯಿತು?

ನಾನು ನೋಡಲಾರೆ. ಎಂದೂ ಹೀಗಿರಲಿಲ್ಲ. 'ಅಲೋಯೆನ್ಸ್' ಕೊಡದೆ ಇದ್ದರೆ ಹೋಗಲಿ. ಕೊಡುವುದಿಲ್ಲವೆಂದರೇನೂ! ಕೊಡದೇ ಇದ್ದರೆ ಅವರೇ ಇಟ್ಟುಕೊಳ್ಳಲಿ. ನನ್ನಾಣೆ. ನೀವು ಕೊರಗಬೇಡಿ. ನಮಗೇನಂತೆ, ಇರುವಷ್ಟೇ ಸಾಕು. ಆಶೆಗೆಲ್ಲಿ ಮಿತಿ?'' ಎಂದರು. ರಾಯರ ಮೂಕ ಸಂಕಟವನ್ನು ನೋಡಿ ಸಹಿಸಲು ಶಕ್ಯವಿಲ್ಲದೆ ಅವರು ಪ್ರೀತಿ ಸಹಾನುಭೂತಿಗಳಿಂದ ಬಗೆಬಗೆಯಾಗಿ ಸಮಾಧಾನ ಹೇಳಿದರು. ವೆಂಕಮ್ಮನವರ ಸರಳ ಸ್ವಭಾವವನ್ನೂ ಬೆಣ್ಣೆಯಂಥ ಮೃದುಮನಸ್ಸನ್ನೂ ರಾಯರು ಪೂರ್ತಿಯಾಗಿ ಮನಗಂಡುದು ಆ ದಿನವೇ. ರಾಯರು ಮಧ್ಯಾಹ್ನ ನಡೆದುದನ್ನು ಸೂಕ್ಷ್ಮವಾಗಿ ತಿಳಿಸಿದರು. ತಮಗೆ ಕೆಲಸ ಹೋಗಬಹುದೆಂಬ ಸುದ್ದಿಯನ್ನು ಮಾತ್ರ ಹೇಳಲಿಲ್ಲ. ವೆಂಕಮ್ಮನವರೂ ಮಕ್ಕಳೂ ಆಗಿನಿಂದಲೇ ವ್ಯಥೆಪಡುವಂತೆ ಮಾಡಬಾರದೆಂಬುದು ಅವರ ಉದ್ದೇಶ. ವೆಂಕಮ್ಮನವರು, "ಇದಕ್ಕೇಕೆ ಇಷ್ಟು ಯೋಚನೆ? ಇವೊತ್ತು ಕೋಪಿಸಿಕೊಂಡರೆ ನಾಳೆ ಶಾಂತವಾಗ್ತಾರೆ. ಇವೊತ್ತು ಕೃಷ್ಣಪಕ್ಷ; ನಾಳೆ ಶುಕ್ಲಪಕ್ಷ; ಇದ್ದೇ ಇದೆ'' ಎಂದರು. ರಾಯರು, "ಸಾಹೇಬರಿಗೆ ಕೋಪ ಬರುವಂತೆ ತಪ್ಪುಮಾಡಿ ತೂಕ ಕಳೆದುಕೊಂಡೆನಲ್ಲಾ—ಅಂತ ನನಗೆ ಸಂಕಟ. ಮುಂದೆ ಏನಾದೀತೋ—ಅಂತ ಭಯ. ಭಯಕ್ಕಿಂತ ಹೆಚ್ಚಾಗಿ ನಾನು ತಪ್ಪು ಮಾಡಿದೆನಲ್ಲಾ – ಎಂಬ ಮನೋವ್ಯಥೆ" ಎಂದರು. ವೆಂಕಮ್ಮನವರು ತಮ್ಮ ಸಾಮರ್ಥ್ಯವನ್ನೆಲ್ಲ ಉಪಯೋಗಿಸಿ ಸಮಾಧಾನ ಹೇಳುತ್ತಿದ್ದರೂ ಆ ದಿನವೂ, ಭಾನುವಾರದ ದಿನವೂ, ರಾಯರು ಕೊರಗಿ ಕೊರಗಿ ಸೊರಗಿ ಹೋದರು. ಸೋಮವಾರದ ದಿನ ಒಂದನೆಯ ತಾರೀಖು. ಅದು ಸಂಬಳದ ದಿನವಾದ ಕಾರಣ, ಕೆಲಸ ಹೆಚ್ಚು. ಹಾಗಿಲ್ಲದೆ ಹೋಗಿದ್ದರೆ ರಾಯರು ಕಾಲೇಜಿಗೆ ಹೋಗದೆ ರಜಕ್ಕೆ ಬರೆದುಕೊಳ್ಳುತ್ತಿದ್ದರು. ಸೋಮವಾರ ಸಂಜೆಯವರೆಗೂ ಮುಳ್ಳಿನ ಮೇಲೆ ನಿಂತಂತೆ ಕೆಲಸ ಮಾಡಿ ಮನೆಗೆ ಬಂದರು. ಕೆಲವು ದಿನಗಳಲ್ಲಿ ಕೆಲಸ ಹೋಗಬಹುದೆಂಬ ಪೇಚಾಟ; ಸಾಹೇಬರಿಗೆ ಮುಖವನ್ನು ತೋರಿಸಲು ಸಂಕೋಚ. ಆದಕಾರಣ, ಅವರು ಸಾಹೇಬರ ಕಣ್ಣಿಗೆ ಬೀಳದಂತೆಯೇ ತಲೆ ಮರೆಸಿಕೊಂಡು ಸಾಂಗವಾಗಿ ಅಂದಿನ ಕೆಲಸಗಳನ್ನು ಪೂರೈಸಿ ನಿರುತ್ಸಾಹ

ದಿಂದ ಮನೆಯನ್ನು ಸೇರಿದರು. ಮಂಗಳವಾರದ ದಿನ ಉಷಃಕಾಲಕ್ಕೇ ಎದ್ದು ಮುಖವನ್ನು ತೊಳೆದುಕೊಂಡರು. ವೆಂಕಮ್ಮನವರು ಆದರದಿಂದ "ಲಾಲ್‌ಬಾಗಿಗಾದರೂ ಹೋಗಿ ಸುತ್ತಾಡಿ ಬನ್ನಿ. ಅದರಿಂದಲಾದರೂ ಮನಸ್ಸು ಹಗುರವಾದೀತು" ಎಂದರು. ರಾಯರೂ ಹಾಗೆ ಮಾಡಬೇಕೆಂದಿದ್ದರು. ಆದಕಾರಣ "ಆಗಲಿ. ಬೇಗ ಬಂದುಬಿಡುತ್ತೇನೆ" ಎಂದು ಹೇಳಿ ರಾಯರು ಹೊರಟುಹೋದರು. ವೆಂಕಮ್ಮನವರು, "ಅಲೋಯಿನ್ಸ್ ಬರದೇ ಇದ್ದರೆ ಪೀಡೆಯೇ ಕಳೆಯಿತು. ಅದನ್ನು ಕೇಳುವುದೇ ಬೇಡ. ಇವರ ಮನಸ್ಸು ಹಗುರವಾದರೆ ಸಾಕು. ಇವರ ಮೂಕಸಂಕಟ ನೋಡಲಾರೆ" ಎಂದುಕೊಂಡು ನಿಟ್ಟುಸಿರುಬಿಟ್ಟರು.

ರಾಯರು ಲಾಲ್‌ಬಾಗಿನ ಬಳಿಗೆ ಹೋದಾಗ ನೀಲಿಮಾಮಯವಾದ ಶುಭ್ರಾಕಾಶದಲ್ಲಿ ಚಿನ್ನದ ರಸದಲ್ಲಿ ಅದ್ದಿದಂತೆ ಕಾಣುತ್ತಿದ್ದ ಮೋಡದ ತುಂಡುಗಳು ಕಂಗೊಳಿಸುತ್ತಿದ್ದುವು. ರಾಯರು ಆ ಮೋಡಗಳ ಸೊಬಗನ್ನೇ ನೋಡುತ್ತ "ಶಿಲ್ಪಿಗಳ ಶಿಲ್ಪಿಯಾದ ಆ ನಮ್ಮಪ್ಪ ನಮ್ಮಂಥ ಬಡವರಿಗಾಗಿ ಈ ಚಿನ್ನದ ರಾಶಿಯನ್ನೇ ಸೃಷ್ಟಿಸಿದ್ದಾನೆ. ಎಲ್ಲಿದ್ದರೂ ಯಾರೇ ಆದರೂ ಚಿನ್ನವನ್ನು ಸುಮ್ಮನೆ ನೋಡಿ ನೋಡಿ ಹರ್ಷಿಸಬೇಕು ತಾನೆ? ಇಷ್ಟು ರಾಶಿಗಟ್ಟಲೆಯಾಗಿ ಹೀಗೆ ತೊಳಗಿ ಬೆಳಗುವ ಚಿನ್ನವನ್ನು ಮತ್ತೆಲ್ಲಿ ಕಾಣಲಾದೀತು?" ಎಂದುಕೊಂಡು ಮುಂದೆ ನಡೆದರು. ಅವರು ನೋಡುತ್ತಿದ್ದ ಹಾಗೆಯೇ ಆ ಮೋಡಗಳಿಗೆ ಬೆಳ್ಳಿಯ ಕಾಂತಿ ಬಂದು ಅವು ಸ್ವಲ್ಪ ಕಾಲ ತೊಳಗಿ, ಆ ಬಳಿಕ ಕೆಲವು ಮೋಡಗಳು ಬೂದುಬಣ್ಣಗಳಿಂದಲೂ ಕೆಲವು ನಸುಕಪ್ಪು ಮುಂತಾದ ಬಣ್ಣಗಳಿಂದಲೂ ಕೂಡಿ ಸಾಮಾನ್ಯ ಸ್ಥಿತಿಗಿಳಿದುವು. ರಾಯರು ಬೆಕ್ಕಸಬೆರಗಾಗಿ "ಭಗವಂತ! ನಿನ್ನ ಲೀಲೆ ಅದ್ಭುತ. ನಮ್ಮನ್ನು ಕುಣಿಸಿ ಕುಣಿಸಿ, ಕುದಿಸಿ ಕುದಿಸಿ, ಬುದ್ಧಿಕಲಿಸುತ್ತೀಯೆ, ಎಂಥವರ ಬಾಳೂ ಇಷ್ಟೇ. ಎಂಥವವರನ್ನೂ ಸಹ ಈ ಪ್ರಪಂಚ ಚಿನ್ನವಾಗಿ ಕಂಡು, ಆಮೇಲೆ ಬೆಳ್ಳಿಯಾಗಿ ನೋಡಿ, ಕೊನೆಗೆ ಕಸವಾಗಿ ಕಾಣುತ್ತದೆ. ನೀನೊಬ್ಬ ನಿತ್ಯ, ದಾಸರ ಮಾತು ಸತ್ಯ. ನೀನೊಬ್ಬ ನಿತ್ಯ. ನಾವೆಲ್ಲ ಈಗ ಕಾಣುತ್ತಿರುವ

ಮೋಡಗಳಂತಿರುವ ಹಿಂಜಿದ ಹತ್ತಿಯ ತುಂಡುಗಳು" ಎಂದುಕೊಂಡರು; ಹುಚ್ಚು ಹಿಡಿದಂತೆ ತಮಗೆ ತಾವೇ ನಕ್ಕರು.

ಅವರು ಮನೆಗೆ ಹಿಂತಿರುಗಿದ ಸ್ವಲ್ಪಹೊತ್ತಿಗೆ ಸಾಹೇಬರ ಮನೆಯ ಆಳು ಅವರಿಗಾಗಿ ಒಂದು ಲಕ್ಕೋಟೆಯನ್ನು ತಂದ. ಸಾಹೇಬರು ಎಂದೂ ಅವರಿಗೆ ಕಾಗದ ಬರೆದಿರಲಿಲ್ಲ. ಅದು ತಮ್ಮನ್ನು ಕೆಲಸದಿಂದ ತೆಗೆದು ಹಾಕಿರುವ ಕಾಗದವಿರಬೇಕೆಂದು ಸುಲಭವಾಗಿ ರಾಯರು ನಿರ್ಧರಿಸಿದರು. ತಂತಿ ವರ್ತಮಾನದ ಲಕ್ಕೋಟೆಯನ್ನು ಒಡೆಯುವವರ ಕೈಗಳಂತೆ ಅವರ ಕೈಯೂ ನಡುಗಿತು; ಎದೆಯು ಡವಗುಟ್ಟುತ್ತಿದ್ದಿತು. ಆಳಿಗೆ ಆ ವಿಕಾರವನ್ನು ತೋರ್ಪಡಿಸದೆ ಅವನನ್ನು ಬೀಳ್ಕೊಟ್ಟು ಅನಂತರ ರಾಯರು ಕಾಗದವನ್ನು ಒಡೆದರು; ಅದನ್ನು ಓದಿಕೊಂಡರು. ಮುಖವು ಸಂತೋಷಕ್ಕೆ ಅರಳಿ ಊರಗಲವಾಯಿತು. ಅಷ್ಟು ಹೊತ್ತಿಗೆ ವೆಂಕಮ್ಮನವರು ಅಲ್ಲಿಗೆ ಬಂದು, "ಅದೇನು ಕಾಗದ? ಗುಟ್ಟಾದರೆ ಹಾಗೇ ಇಟ್ಟುಕೊಳ್ಳಿ, ಆವೊತ್ತಿನ ಕಾಗದದಂತೆ. ಗುಟ್ಟಲ್ಲದಿದ್ದರೆ, ಹೇಳಿ" ಎಂದರು. ರಾಯರು ನಗುತ್ತ "ಶನಿವಾರ ನಾನು ತರಿಸಿದ್ದ ಮೂವತ್ತೆರಡು ಇಡ್ಲಿಗಳನ್ನೂ ನಾನೊಬ್ಬನು ತಿನ್ನುವುದಕ್ಕೇ ತರಿಸಿದ್ದೆನೆಂದು ಸಾಹೇಬರು ತಪ್ಪಾಗಿ ಭಾವಿಸಿಕೊಂಡಿದ್ದಾರೆ. ಪ್ರತಿದಿನವೂ ನಾನು ಮೂವತ್ತೆರಡು ಇಡ್ಲೀ ತಿನ್ನುತ್ತೇನೆಂದು ತಿಳಿದುಕೊಂಡು, ನನ್ನ ಸಂಬಳದಲ್ಲಿ ಸಂಸಾರದ ಖರ್ಚಿಗೆ ಹೆಚ್ಚು ಹಣವೇ ಉಳಿಯಲಾರದೆಂದು ಭಾವಿಸಿ ತಮಗೆ ಮರುಕವೆಂದು ಸೂಚಿಸಿದ್ದಾರೆ. ಅಲ್ಲದೆ, ದಿನಕ್ಕೊಂದು ರೂಪಾಯಿನಂತೆ ಲೆಕ್ಕಾಚಾರವಾಗುವ ಮೂವತ್ತು ರೂಪಾಯಿಗಳನ್ನೂ ನನಗೆ ಪ್ರತಿ ತಿಂಗಳೂ ತಮ್ಮ ಸಂಬಳದಿಂದ 'ಇಡ್ಲೀ ಅಲೋಯೆನ್ಸ್' ಆಗಿ ಸಲ್ಲಿಸುವುದಾಗಿ ಬರೆದಿದ್ದಾರೆ. ಹೋದ ತಿಂಗಳು ಮತ್ತು ಈ ತಿಂಗಳು 'ಇಡ್ಲೀ ಅಲೋಯೆನ್ಸ್' ಅರುವತ್ತು ರೂಪಾಯಿಗಳಿಗೆ ಚೆಕ್ ಕಳುಹಿಸಿದ್ದಾರೆ. ನಾನು ದಯವಿಟ್ಟು ಸ್ವೀಕರಿಸ ಬೇಕೆಂದೂ, ನಾವೆಲ್ಲರೂ ಸಹೋದರರಾದ ಕಾರಣ ಈ ಹಣವನ್ನು ಸ್ವೀಕರಿಸಲು ನಾನು ಸಂಕೋಚಪಡಬೇಕಾಗಿಲ್ಲವೆಂದೂ ಬರೆದಿದ್ದಾರೆ. ನಮ್ಮ ಸಾಹೇಬರು ಚಿನ್ನದಂಥವರು. ಆದರೆ ನಿಜಾಂಶ ತಿಳಿಯದೆ ಹಣ

ಕಳುಹಿಸಿದ್ದಾರೆ. ಆದಕಾರಣ, ನಾವು ಈ ಹಣವನ್ನು ಮುಟ್ಟಬಾರದು'' ಎಂದರು. ವೆಂಕಮ್ಮನವರು. ''ಮನೆಗೆ ಬಂದ ಲಕ್ಷ್ಮಿಯನ್ನು ತಳ್ಳಬಾರದು. ಆ ಮಹರಾಯನ ಹೊಟ್ಟೆ ತಣ್ಣಗಿರಲಿ! ಕೇಳದೇಲೇ 'ಅಲೋಯೆನ್ಸ್' ಬಂದಿದೆ. ಹೆಸರು ಯಾವುದಾದರೇನಂತೆ? ಇದೊಂದು ಹೊಸ ಅಲೋಯೆನ್ಸ್. ನೀವು ಬೆಪ್ಪು ಬೆಪ್ಪಾಗಿ ಬೇಡವೆಂದು ಬಿಡಬೇಡಿ ನಿಮ್ಮ ಸಾಹೇಬರು ವಿದೇಶದವರು. ಅಲ್ಲಿ ಆಸ್ತಿ; ಇಲ್ಲಿ ಭಾರಿ ಸಂಬಳ. ತಿಂಗಳಿಗೆ ಮೂವತ್ತು ರೂಪಾಯಿ ಕೊಡಲೇಳಿ. ನಮ್ಮ ಕಾರ್ಪಣ್ಯವಾದರೂ ಹೋಗಲೇಳಿ'' ಎಂದರು. ಆ ವೇಳೆಗೆ ಅಂಚೆ ಇಲಾಖೆಯವನು ಕೆಂಪು ಬೈಸಿಕಲ್ ಮೇಲೆ ಬಂದಿಳಿದು ಮನೆಯೊಳಕ್ಕೆ ಬಂದನು. ತಂತಿ ವರ್ತಮಾನ ಎಲ್ಲಿಂದಲೋ ಬಂದಿರಬೇಕೆಂದು ದಂಪತಿಗಳ ಮನಸ್ಸು ತತ್ತರಿಸಿ ಹೋಯಿತು. ವೆಂಕಮ್ಮನವರು ''ಯಾವ ಊರಿನ ತಂತಿಯಪ್ಪಾ!'' ಎಂದರು. ಬಂದಿದ್ದವನು, ''ಟೆಲಿಗ್ರಾಫ್ ಮನಿಯಾರ್ಡರ್ ಬಂದಿದೆ, ತಾಯಿ, ನೂರು ರೂಪಾಯಿಗಳಿಗೆ'' ಎಂದನು. ರಾಯರು ಅದನ್ನು ತೆಗೆದುಕೊಂಡರು; ಅವನು ಹೊರಟುಹೋದ ಬಳಿಕ ಅವರು ವೆಂಕಮ್ಮನವರೊಡನೆ, ''ನನ್ನ ಗುಟ್ಟು ಈಗ ರಟ್ಟಾಯಿತು. ಗೊತ್ತಾಯಿತೆ? ಅವೊತ್ತು ಕಾಗದ ಬರೆದೆ, ನನ್ನ ಸ್ನೇಹಿತನಿಗೆ. ಅವನು ಡಿಲ್ಲಿಯಲ್ಲಿ ದೊಡ್ಡ ಅಧಿಕಾರದಲ್ಲಿದ್ದಾನೆ. 'ನನಗೆ ಸಮಯವಾಗಿದೆ, ನಲವತ್ತು ರೂಪಾಯಿ ಕಳುಹಿಸು. ಹತ್ತು ತಿಂಗಳಲ್ಲಿ ತೀರಿಸುತ್ತೇನೆ' ಎಂದು ಬರೆದಿದ್ದೆ. ಉಚಿತವಾಗಿ ನೂರು ರೂಪಾಯಿ ಕಳುಹಿಸಿದ್ದಾನೆ. ಇದೇ ನನ್ನ ಕಾಗದದ ಗುಟ್ಟು. ನಿನಗೆ ಹೊಸ ಸೀರೆ ಕೊಂಡು ಕೊಡುವುದೇ ನನಗೆ ಒದಗಿದ್ದ ಸಮಯ. ಅದಕ್ಕಾಗಿ ಅವನಿಗೆ ಕಾಗದ ಬರೆದೆ. ಅದನ್ನ ಅವೊತ್ತು ನಿನಗೆ ತಿಳಿಸಲಿಲ್ಲ. ನನ್ನ ಗುಟ್ಟು ಆಗಲೇ ಹೇಳುತ್ತಿದ್ದೆ. ಆದರೆ, ನಿನ್ನ ಆಶೆ ಆಕಾಶಕ್ಕೆ ಏರಿಹೋಗಿ ಅವನಿಂದ ಹಣ ಬರದೇ ಹೋದಾಗ ನಿನ್ನ ಮನಸ್ಸು ಪಾತಾಳಕ್ಕೆ ಇಳಿದು ಹೋಗದಿರಲೆಂದು ತೋರಿತು. ಅದರಿಂದ ಹಣ ಬಂದರೆ ಮಾತ್ರ ತಿಳಿಸೋಣವೆಂತ ಸುಮ್ಮನಿದ್ದೆ, ನಿನಗೂ ಸರಸೂಗೂ ಸೊಗಸಾದ ಸೀರೆಗಳನ್ನು ತರಲು ಈ ಹಣ ಸಾಕು" ಎಂದರು. ಸರಸೂ ಮುಖದಲ್ಲಿ ಮುಗುಳುನಗೆ (ಉಳಿದ

ಮಕ್ಕಳು ಮನೆಯಲ್ಲಿರಲಿಲ್ಲ.) ವೆಂಕಮ್ಮನವರೂ ತಡೆಯಲಾರದ ಸಂತೋಷದಿಂದ "ಇದ್ದರೆ ಇಂಥಾ ಸ್ನೇಹಿತರಿರಬೇಕು. ಇಂಥಾ ಸಾಹೇಬರಿರಬೇಕು. ಅದೇನೋ ಸರಿ. ಆ ಇಡ್ಲೀ 'ಅಲೋಯೆನ್ಸ್' ಮಾತ್ರ ಬಿಡಬೇಡಿ. ಅದರಿಂದ ಒಂದು ಕಡೆ ಮನೆಗೆ ಬಂದ ಲಕ್ಷ್ಮೀದೇವಿಗೆ ಅವಮಾನ. ಒಂದು ಕಡೆ ಸಾಹೇಬರಿಗೆ ಅವಮಾನ; ನೀವು ಹಾಗೆ ಅವರಿಗೆ ಅವಮಾನ ಮಾಡಿದರೆ ಈ ಸಲ ನಿಜವಾಗಿಯೂ ಅವರಿಗೆ ಕೋಪ ಬಂದು, ನಿಮ್ಮ ಕೆಲಸ ಹೋಗಿ ನಾವು ಮುಳುಗೇ ಹೋಗಬೇಕಾಗುತ್ತೆ. ನಿಮ್ಮ ದಮ್ಮಯ್ಯ, ನೋಡಿಕೊಳ್ಳಿ" ಎಂದರು. ರಾಯರು, "ನೋಡೋಣ. ನಾನು ಈಗಲೇ ಯಾವುದೂ ಹೇಳಲಾರೆ" ಎಂದರು; ಕೂಡಲೇ "ಎಲ್ಲರನು ಸಲಹುವನು, ಇದಕೆ ಸಂಶಯವಿಲ್ಲ" ಎಂದು ಹಾಡಿಕೊಳ್ಳುತ್ತ ತಮ್ಮ ಕೊಟಡಿಗೆ ಹೊರಟು ಹೋದರು. ವೆಂಕಮ್ಮನವರು ನಗುತ್ತ, "ಸರಸೂ, ಸರಸೂ, ನಿನ್ನ ಪುಣ್ಯ. ದೇವರು ಇವರ ಹಾಗೆ ನಿನಗೆ ಗೊಗ್ಗರ ಧ್ವನಿ ಕೊಟ್ಟಿಲ್ಲ" ಎಂದರು; ತಾಯಿ ಮಗಳಿಬ್ಬರೂ ನಕ್ಕರು.

# ಮೇಷ್ಟರ ಸೇಡು

ಅಂದು ಮಧ್ಯಾಹ್ನ ಗಂಗಾಧರಯ್ಯನ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವನು ಅರೆ ಹುಚ್ಚನಂತೆ ಕಾಲೇಜಿನ ಮಹಡಿಯಿಂದ ಇಳಿದು ಬರುತ್ತಿದ್ದ. ಅವನು ಮಿತಿಮೀರಿದ ಸಂತೋಷದಿಂದ ಇಳಿದು ಬರುತ್ತಿದ್ದ ರಭಸಕ್ಕೆ ಮಹಡಿಯ ಮೆಟ್ಟಲುಗಳೇ ಜಗ್ಗಿ ಹೋಗುತ್ತವೋ ಎಂದು ತೋರುತ್ತಿದ್ದವು. ಅಷ್ಟರಲ್ಲಿ ಮಹಡಿಯ ಮೇಲಕ್ಕೆ ಹತ್ತುತ್ತಿದ್ದ ಚೊಕ್ಕಣ್ಣ "ಓಹೋ! ಸಲ್ಲಯ್ಯಾ ಗಂಗು! ಮೆಟ್ಟಲು ಉಳೀಬೇಕೋ ಬೇಡವೊ? ಇದೇನು ರಭಸ, ಏನು ಕಥೆ, ಜಾರಿ ಬಿದ್ದು ತಲೇ ಒಡಕೊಳ್ತಿದ್ದೆ. ನಾನು ನಿನ್ನ ಜೀವ ಉಳಿಸಿದ್ದೀನಿ. ಹನ್ನೊಂದು ಘಂಟೆಯಿಂದಲೂ ಜೋಲು ಮೋರೆ ಹಾಕ್ಕೊಂಡು ಕೊರಗ್ತಾ ಇದ್ದೆ. ಈಗ ಹಿಗ್ಗಿ ಹೀರೆಕಾಯಿ ಆಗಿ ಏಳೋದೂ ಬೀಳೋದೂ ಕಾಣದೆ, ಹಾರಿ ಹಾರಿ ಮೆಟ್ಟಲು ಇಳಿದು ಬರ್ತಿದ್ದೀಯೆ. ಇದೇನೋ ಇಷ್ಟು ಸಂತೋಷ? ಮದುವೆಯೇನಾದರೂ ಗೊತ್ತಾಯಿತೇನು? ಗೊತ್ತಾಗಿದ್ದರೆ ಹೇಳಿಬಿಡು. ನಾನು ಅಳಿಯನ ಹಿಂದೆ ಗೆಳೆಯ. ಬಂದು ಝಾಂಡಾ ಹೂಡಿಬಿಡ್ತೇನೆ" ಎಂದ. ಇಬ್ಬರೂ ಕೆಳಕ್ಕಿಳಿದು ಬಂದರು. ಆಗ ವಿರಾಮ ಸಮಯ. ಇಬ್ಬರೂ ಮೌನವಾಗಿ ನಡೆದು ಕಾಲೇಜಿನ ಬಯಲಿನಲ್ಲಿದ್ದ ಮಾವಿನ ಮರದ ಕೆಳಗೆ ಕುಳಿತರು. ಚೊಕ್ಕಣ್ಣ ನಗುತ್ತ "ನನ್ನ ಪ್ರಶ್ನೆಗೆ ಉತ್ತರವಿಲ್ಲವೇನೊ? ಮದುವೆ ಎಂದೋ?" ಎಂದು ಕೇಳಿದ.

ಗಂಗಾಧರಯ್ಯ :—"ಯಾವಾಗಲೂ ನಿನಗೆ ಹುಡುಗಾಟಕೆಯೇನೋ, ಚೊಕ್ಕಣ್ಣ! ಅಲ್ಲವೋ, ಡಿಸೆಂಬರು ತಿಂಗಳಲ್ಲಿ ಮದುವೆಯೆಂದ ರೇನೋ!",

ಚೊಕ್ಕಣ್ಣ :—"ನಾನೇನು ನಾಳೆಯೇ ನಿನ್ನ ಮದುವೆ—ಅಂತ ಹೇಳಿದೆನೆ? ಫೆಬ್ರವರೀಗೋ ಮಾರ್ಚೀಗೋ ಮದುವೆಯಾಗಬಹುದಲ್ಲಾ! ಆಗ ನಾನೂ ಬರಬಹುದಲ್ಲಾ!"

ಗಂಗಾಧರಯ್ಯ :—"ಸದ್ಯಕ್ಕೆ ನಿನಗೆ ಆ ಆಯಾಸವೇನೂ ಒದಗುವ ಪ್ರಮೇಯವಿಲ್ಲ."

ಚೊಕ್ಕಣ್ಣ :—"ಹಾಗಾದರೆ ಇದೇಕೆ, ಇಷ್ಟು ಸಂತೋಷ? ಬೆಳಗ್ಗೆಯೆಲ್ಲಾ ಕುಲಿಮೇ ತಿದೀ ಹಾಗೆ ನಿಟ್ಟುಸಿರು ಬಿಡ್ತಿದ್ದೆ. ಈಗ ಸಂತೋಷದಿಂದ ಓಡಿ ಬರ್ತಾ ಇದ್ದೀಯೆ. ಮೇಷ್ಟ್ರು ರೂಮಿಗೆ ಹೋಗಿದ್ದೇ ಅಂತ ಕಾಣುತ್ತೆ. ಅಂದ ಹಾಗೇ ಜ್ಞಾಪಕ ಬಂತು, ಮೇಷ್ಟ್ರು ಅನ್ನೋ ಹೊತ್ತಿಗೆ. ನಿನ್ನೆಯಿಂದ ನಿನ್ನ ಮೇಲೆ ಹಬ್ಬಿ ಹರಡ್ತಾ ಇರೋ ಸಮಾಚಾರ ಗೊತ್ತೇನು ನಿನಗೆ?"

ಗಂಗಾಧರಯ್ಯ :—"ಇಲ್ಲಪ್ಪ. ನಾನೇನೂ ಮಾಡಿಲ್ಲವಲ್ಲಾ!"

ಚೊಕ್ಕಣ್ಣ :—"ಮಾಡಿದ್ದೀಯೋ ಇಲ್ಲವೋ ನಾನು ಕಾಣೆ. ನೀನು ಮೇಷ್ಟ್ರರ ಅನುಗ್ರಹ ಸಂಪಾದಿಸೋಕೆ ಈಗಿನಿಂದಲೇ 'ಕಾಕಾಪುಡಿ' ಹೊಡೀತಿದ್ದೀ-ಅಂತ ಗುಲ್ಲೋ ಗುಲ್ಲು. ಮೊನ್ನೆ ನೀನು ಅವರ ಜೊತೇಲಿ ಅವರ ಗಾಡಿಯಲ್ಲಿ ಕೂತುಕೊಂಡು ಹೋಗಿದ್ದೆಯಲ್ಲೋ! ಪ್ರೊಫೆಸರ್ ಜೊತೇಲಿ ಹೋಗಬೇಕಾದರೆ, ಅದೂ ಒಂದು ಪುಣ್ಯ. ಯಾರಿಗುಂಟು, ಯಾರಿಗಿಲ್ಲ! ಅದನ್ನ ಕಂಡವರೆಲ್ಲಾ ಹೊಟ್ಟೇ ಕಿವುಚಿಕೊಂಡು ನಿನ್ನ ದೂರಿದೊಂಬಿ ಮಾಡ್ತಾ ಇದ್ದಾರೆ. ನಾನು ನಿನ್ನ ಕಡೆ ವಹಿಸಿಕೊಂಡು ಮಾತನಾಡಿದೆ. ನನಗೂ ಘನವಾದ ಬಿರುದು ಕೊಟ್ಟರು, ಬೆಪ್ಪುತಕ್‌ಡಿ-ಅಂತ."

ಗಂಗಾಧರಯ್ಯ :—"ಹೋಗಲಿ, ನೀನೊಬ್ಬನಾದರೂ ನನ್ನ ಕಡೆ ಮಾತನಾಡಿದೆಯಲ್ಲಾ! ಅಷ್ಟೇ ನನ್ನ ಪುಣ್ಯ. ಆ ಹೊಟ್ಟೇಕಿಚ್ಚು ಪಡೋರಿಗೆಲ್ಲಾ ಹೇಳು, ನನಗೆ ಬಹಳ ಹೆಚ್ಚಾಗೇ ನಂಬರು ಬರ್ತಾ ಇದೆ, ನಾನು 'ಕಾಕಾಪುಡಿ' ಹೊಡೆಯೋನೂ ಅಲ್ಲ, ನಾನು ಹೊಡೆಯಬೇಕಾಗಿಯೂ ಇಲ್ಲ, ಅಂತ. ಮೇಷ್ಟ್ರರು ನನ್ನನ್ನು ತಮ್ಮ ಗಾಡಿಯಲ್ಲಿ ಕೂರಿಸಿಕೊಂಡು

ಹೋದುದ್ದಕ್ಕೇ ಇಷ್ಟು ಸಂಕಟ ಇವರಿಗೆ. ಅವರ ಮನೆಗೆ ಹೋದಮೇಲೆ ದೊಡ್ಡ ಬೆಳ್ಳಿಯ ತಟ್ಟೆಯ ತುಂಬ ಲಾಡು, ಅಂಬೊಡೆ, ಚಕ್ಕಲಿ ಮುಂತಾದ ಬಗೆ ಬಗೆಯ ತಿಂಡಿಕೊಟ್ಟರು; ಅದರ ಜೊತೆಗೆ ಕುಡಿಯಲು ಹಾಲು ಕೊಟ್ಟರು. ಇದನ್ನೂ ಅವರಿಗೆಲ್ಲಾ ಹೇಳಿಬಿಡು. ಹೊಟ್ಟೆಯಲ್ಲಿ ಕಿಚ್ಚು ಇನ್ನೂ ಮೇಲಕ್ಕೇಳಲಿ.''

ಚೊಕ್ಕಣ್ಣ :—''ಸರಿ, ಸರಿ, ನನ್ನ ಊಹೆಯೇ ನಿಜವಾಯಿತು.''

ಗಂಗಾಧರಯ್ಯ :—''ಹಾಗೆಂದರೆ ?''

ಚೊಕ್ಕಣ್ಣ :—''ಏನು ಆಟ ಕಟ್ಟೇಯೋ, ನೀನು! ಲೋ! ನಿನಗೆ ಏನೂ ತಿಳಿದೇ ಇಲ್ಲ, ಅಲ್ಲವೇ? ಹಾಗಾದರೆ ನಾನೇ ಹೇಳ್ತೇನೆ ಕೇಳು. ಮೇಷ್ಟರ ಸಂಬಂಧದ ಯಾವುದೋ ಹೆಣ್ಣಿಗೆ ಮದುವೆಯಾಗಬೇಕಾಗಿದೆ. ಅದು ಕುರೂಪಿಯಾಗಿರಬೇಕು. ಅದಕ್ಕೆ ವರ ಸಿಕ್ಕಿಲ್ಲ. ಯಜ್ಞ ಪಶುವಾಗಿ ನೀನು ಸಿಕ್ಕಿದ್ದೀಯೆ ಪ್ರೊಫೆಸರುಗಳನ್ನು ಮೆಚ್ಚಿಸೋಕೆ ವಿದ್ಯಾರ್ಥಿಗಳು ಮಿತಿಮೀರಿದ ನಯವಿನಯ ಪ್ರೀತಿ ಗೌರವ, ಭಯಭಕ್ತಿ ತೋರಿಸೋ ಆಟ ಕಟ್ಟಿದ ಹಾಗೆ, ಈಗ ಪ್ರೊಫೆಸರೇ ತಮ್ಮ ಶಿಷ್ಯೋತ್ತಮನಿಗೆ ಉಪಚಾರ ಮಾಡಿದ್ದಾರೆ. ನಗುವಿನ ಮಳೆಯೇನು, ಗಾಡೀಲಿ ಕೂರಿಸಿಕೊಂಡು ಹೋಗೋದೇನು, ಬೆಳ್ಳಿ ತಟ್ಟೆಯಲ್ಲಿ ಉಪಹಾರಗಳೇನು, ಕ್ಷೀರಾಮೃತ ಪಾನವೇನು, ಇವೆಲ್ಲಾ ನಡೀತಿವೆ. ಆದರೂ, ಕುರೂಪಿ ಹೆಣ್ಣು. ಅದರ ಕೈಹಿಡಿಯುವ ಸುಯೋಗ ನಮ್ಮ ರಾಯರಿಗೆ ಬೇಡವಾಗಿದೆ. ಅದಕ್ಕೇ ಬೆಳಗಿನಿಂದಲೂ ಮುಖ ಜೋತುಬಿದ್ದಿತು. ಮತ್ತೆ ಮೇಷ್ಟರಿಂದ ಆಹ್ವಾನ. ಕರ್ತವ್ಯಬೋಧನೆ. ಬಹುಶಃ ಭಾರಿ ವರದಕ್ಷಿಣೆ ಬುತ್ತಿಯ ವಾಗ್ದಾನ. ಅದನ್ನು ಕೇಳಿ ಸಂತೋಷ ಉಕ್ಕೋಣ, ಮೇಷ್ಟರಿಗೆ ವಂದನೆ ಒಪ್ಪಿಸಿ ರಾಯರು ಹಾರಿ ಹಾರಿ ಕಾಲೇಜು ಮಹಡಿಯಿಂದ ಇಳಿದು ಬರ್ತಿದ್ದರು. ಮೇಷ್ಟರು ಒಡ್ಡಿರೋ ಇಲಿ ಕತ್ತರಿ, ರಾಯರಿಗೆ, ಕಲ್ಪನೆಗೇ ಬಂದಿಲ್ಲ.''

ಗಂಗಾಧರಯ್ಯ :—''ಸಾಕೋ ನಿನ್ನ ಕಗ್ಗ. ನನ್ನ ಕಿವಿ ತೂತು ಬಿದ್ದು ಹೋಗಿದೆ. ಇನ್ನು ನಿಲ್ಲಿಸೋ. ಇದು ಕಾಲೇಜೋ, ಹೈಸ್ಕೂಲಲ್ಲವೋ.

'ಮೇಷ್ಟ್ರು, ಮೇಷ್ಟ್ರು, ಅನ್ನೋಕೆ. 'ಪ್ರೊಫೆಸರ್, ಪ್ರೊಫೆಸರ್' ಅಂತ ಬರಲೋ ಮಹರಾಯ."

ಚೊಕ್ಕಣ್ಣ:—"ಹಾಗೆ ದಾರೀಗೆ ಬಾ, ಮತ್ತೆ! ಮಾತು ತಿರುಗಿಸಬೇಡ. ನನ್ನ ಊಹೆ ನಿಜ; ಅದನ್ನು ಒಪ್ಪಿಕೊಳ್ಳೋದಕ್ಕೆ ಇಷ್ಟವಿಲ್ಲ. ಮೇಷ್ಟ್ರು ಅನ್ನಬೇಡ-ಅಂತ ಮಾತು ತಿರುಗಿಸೋ ಪ್ರಯತ್ನ ಭರದಿಂದ ಸಾಗಿದೆ. ಮೇಷ್ಟ್ರು ಅನ್ನೋದೆ ನನ್ನ ಮನಸ್ಸಿಗೆ ಚೆನ್ನ. 'ಪ್ರೊಫೆಸರ್' ಅನ್ನೋದು ಅದರಷ್ಟು ಚೆನ್ನಲ್ಲ. ಇಷ್ಟಕ್ಕೂ ಹೆಸರಿನಲ್ಲೇನಿದೆಯೋ? ಷೇಕ್ಸ್‌ಪಿಯರ್ ಹೇಳಿಯೇ ಇದ್ದಾನೆ. ಯಾವ ಹೆಸರಿನಿಂದ ಕರೆದರೂ, ಗುಲಾಬಿ ಹೂವು, ಗುಲಾಬಿ ಹೂವೇ ಅಂತ, ಅದೆಲ್ಲಾ ಹಾಗಿರಲಿ. ನನ್ನ ಊಹೆ ಸರಿ ತಾನೆ?''

ಗಂಗಾಧರಯ್ಯ:—"ಹೋಗಲಿ, ಬಿಡೋ. ನಾನೂ ಮೇಷ್ಟರೆಂದೇ ಬಿಟ್ಟರೆ ಮುಗಿಯಿತು. ನಿಜವಾಗಿ ಹೇಳೋದಾದರೆ ನಿನಗೆ 'ಬೆಪ್ಪು ತಕಡಿ' ಅಂತ ಬಿರುದು ಬಂದಿರೋದು ಸರಿಯಾಗಿದೆ. ನಿನಗೆ ಒಪ್ಪತಕ್ಕ ಭರ್ಜರೀ ಬಿರುದು."

ಚೊಕ್ಕಣ್ಣ:—"ಅಂತೂ, ನಾನೊಂದು ಫುಟ್‌ಬಾಲ್ ಅನ್ನು, ಆ ಕಡೆಯೋರೂ ಒದೀತಾರೆ, ಈ ಕಡೆಯೋರೂ ಒದೀತಾರೆ. ಅವರೂ ಬೆಪ್ಪುತಕಡಿ ಅಂದರು. ನೀನೂ ಬೆಪ್ಪುತಕಡಿ ಅಂದೆ. ಮಾತು ತಿರುಗಿಸುವ ಜಾಣತನವೆಂದರೆ ಹೀಗಿರಬೇಕೋ; ಮೆಚ್ಚಿದೆ. ತಿಳಿತೇನೋ? ನನ್ನ ಊಹೆ ನಿಜವೇ ತಾನೆ?"

ಗಂಗಾಧರಯ್ಯ:—"ಖಂಡಿತ ನಿಜವಲ್ಲ. ಹದಿನಾರಾಣೆಯ ಅಪ್ಪಟ ಸುಳ್ಳು ಊಹೆ. ಮೊನ್ನೆ ಪ್ರೊಫೆಸರ್—ಅಲ್ಲ ಅಲ್ಲ—ನಿನ್ನ ಮಾತಿನಲ್ಲೇ ಹೇಳಬೇಕಾದರೆ ಮೇಷ್ಟ್ರು ನನ್ನ ಅವರ ಮನೆಗೆ ಕರೆದುಕೊಂಡು ಹೋಗಿದ್ದರಲ್ಲೋ. ಅವರು ನಿಜವಾಗಿಯೂ ಋಷಿಗಳಂಥವರು. ಏಕೆಂದರೆ, ಒಳಗೊಂದು, ಹೊರಗೊಂದು—ಅವರ ಹತ್ತಿರವೇ ಇಲ್ಲ. ಧನಿಕರು ಮೇಲು, ದರಿದ್ರರು ಕೀಳು—ಎಂಬ ಭಾವನೆಯಿಲ್ಲ. ಬಾಯಿ ದುಡುಕು; ಆದರೆ ಮನಸ್ಸು ಬೆಣ್ಣೆ. ಹೃದಯ ನಿಷ್ಕಲ್ಮಷ. ನನಗೆ ಎಷ್ಟು ಉಪಚಾರ ಮಾಡಿ

ಎಷ್ಟು ಪ್ರೀತಿ ತೋರಿಸಿದರೊ! ನಾನೆಷ್ಟು ಬಡವ! ನಾನು ಇನ್ನೂ ವಿದ್ಯಾರ್ಥಿ; ಚಿಕ್ಕವನು ನಾನೆಲ್ಲಿ, ಅವರೆಲ್ಲಿ?"

ಚೊಕ್ಕಣ್ಣ :—"ಹೌದು ನೀನೆಲ್ಲಿ, ಅವರೆಲ್ಲಿ? ನೀನು ಮಾವಿನ ಮರದ ಕೆಳಗೆ ನನ್ನೊಡನೆ ಬಯಲಿನಲ್ಲಿ; ಅವರು ಮಹಡಿಯ ಮೇಲೆ ಅವರ ಕೊಟಡಿಯಲ್ಲಿ. ಬಳಸಿ ಬಳಸಿ ಮಾತನಾಡಬೇಡ. ಬೇಗ ಹೇಳೊ."

ಗಂಗಾಧರಯ್ಯ :—"ನಿನ್ನೆಯಿಂದ ಕೊರಗಿ ಕೊರಗಿ ಸತ್ತು ಹೋಗಿದ್ದೀನಿ. ನನ್ನ ಮಾತು ಕೇಳುವಷ್ಟು ಸಹನೆ........"

ಚೊಕ್ಕಣ್ಣ :—"ನೀನು ಸತ್ತು ಹೋಗಿಲ್ಲ. ಮಾವಿನ ಮರದ ಕೆಳಗೆ ಬದುಕಿಯೇ ಕೂತಿದ್ದೀಯೆ. ನಡೆದ ಸಂಗತಿ ಹೇಳೊ."

ಗಂಗಾಧರಯ್ಯ :—"ನನ್ನ ಯೋಗ್ಯತೆಗೆ ಮಿೀರಿದ ಪ್ರೀತಿ ತೋರಿಸಿದವರಲ್ಲಿ ಮೊನ್ನೆ ದುಡುಕಿ ಮಾತನಾಡಿ ಬಂದುಬಿಟ್ಟೆನಲ್ಲಾ, ಅವರು ಎಷ್ಟು ವ್ಯಥೆಪಟ್ಟರೋ, ಇಲ್ಲವೇ ಎಷ್ಟು ಕೋಪಿಸಿಕೊಂಡರೋ ಅಂತ ಮೊನ್ನೆ ಸಂಜೆಯಿಂದಲೂ ಕೊರಗಿದೆ."

ಚೊಕ್ಕಣ್ಣ :—"ಅಷ್ಟೊಂದು ತಿಂಡಿಕೊಟ್ಟು ಆದರಿಸಿದವರಲ್ಲೇ ದುಡುಕಿ ಮಾತನಾಡಿಬಿಟ್ಟೆಯಾ? ವರನಾಗು — ಅಂದರು. ಶಿಷ್ಯನಾಗಿರೋದು ಮರೆತುಬಿಟ್ಟೆ. ನ್ಯಾಯ ತಾನೆ! ಗಂಡಿನೋರಿಗೆ ಹೆಣ್ಣಿನೋರಿನ ಮೇಲೆ ದರ್ಪವಿರಲೇಬೇಕು. ಇನ್ನು ಸಾಕ್ಷಾತ್ ವರನೇ ಆಗಬೇಕಾದವನು ಗಂಡಿನೋರೆಲ್ಲರಿಗಿಂತ ಹೆಚ್ಚು. ಅವರೆಲ್ಲರ ದರ್ಪದ ಕೀಲು. ಕೇಳಬೇಕೆ?"

ಗಂಗಾಧರಯ್ಯ :—"ತಲೆಯೆಲ್ಲಾ ಹರಟಬೇಡ, ಸುಮ್ಮನೆ ಕೇಳೊ."

ಚೊಕ್ಕಣ್ಣ :—"ಬೇಗ ಹೇಳೋ, ಮಹಾರಾಯ."

ಗಂಗಾಧರಯ್ಯ :—"ನಾನು ತಿಂಡಿಯನ್ನೆಲ್ಲ ಮುಗಿಸಿ ಹಾಲು ಕುಡಿದ ಮೇಲೆ ಮೇಷ್ಟರಿಗೆ ಕೈಮುಗಿದು ಹೊರಡುವುದರಲ್ಲಿದ್ದೆ. ಮೇಷ್ಟರು ಏನೆಂದರು ಗೊತ್ತೆ?"

ಚೊಕ್ಕಣ್ಣ :—"ಗೊತ್ತಿಲ್ಲಪ್ಪ. ಗೊತ್ತಿದ್ದರೆ ನಿನ್ನ ಕೇಳಬೇಕಾಗಿತ್ತೆ? ಈಗ ಯಾರು ಬೆಪ್ಪುತಕಡಿ? ನಾನೋ, ನೀನೋ? ಬಳಸಿ, ಬಳಸಿ, ಮಾತನಾಡಬೇಡ ಬೇಗ ಹೇಳೋ."

ಗಂಗಾಧರಯ್ಯ :—"ನಾನು ಆತುರಕ್ಕೂ ಅವಸರಕ್ಕೂ ಆಳೇ ಅಲ್ಲ. ಸುಮ್ಮನೆ ಮಾತನಾಡದೆ ಕೇಳು. ನಾನು ಹಾಲು ಕುಡಿದ ಮೇಲೆ, ಮೇಷ್ಟರು ಹೇಳಿದರು, 'ನಾನು ಕೊಟ್ಟ ತಿಂಡೀ ಮೇಲೆ ಹೋಟಲು ಕಾಫಿ ಬಗ್ಗಿಸಿಕೊಂಡು, ಅದನ್ನ ಅಶುದ್ಧ ಮಾಡಕೂಡದು' ಅಂತ. ನಾನು ಸುಮ್ಮನಿರಬೇಕಾಗಿತ್ತು. ಅಧಿಕ ಪ್ರಸಂಗಿಯಾಗಿ ಒದರಿದೆ. 'ಅವೊತ್ತೂ ಹೋಟಲು ಕಾಫೀ ತಿಂಡಿ ಬೈದಿರಿ ಸಾರ್, ಇವೊತ್ತೂ ಬೈಯುತ್ತೀರಿ. ಈ ಬೆಂಗಳೂರಿನಲ್ಲಿ ಹೋಟಲುಗಳೇ ಇಲ್ಲದೆ ಹೋಗಿದ್ದರೆ, ಹೊರಗಿನಿಂದ ಬರುವವರಿಗೂ, ಇಲ್ಲಿ ಮನೆಯಿಲ್ಲದ ವಿದ್ಯಾರ್ಥಿಗಳಿಗೂ ಗತಿಯೇನು? ತಮಗಾದರೆ ಕೈತುಂಬ ಸಂಬಳ, ಭರ್ಜರೀ ಮನೆ, ಕಾಲಕಾಲಕ್ಕೆ ಊಟ ತಿಂಡಿಗಳ ಅನುಕೂಲ—ಎಲ್ಲಾ ಉಂಟು. ಎಲ್ಲರಿಗೂ ಈ ಸೌಕರ್ಯ ಗಳಿವೆಯೇ ಸಾರ್?—ಎಂದು ಕೇಳಿಬಿಟ್ಟೆ."

ಚೊಕ್ಕಣ್ಣ :—"ಭೇಷ್, ಭೇಷ್, ಸೊಗಸಾಗಿ ಹೇಳಿಬಿಟ್ಟೆ. ನೀನು ಧೈರ್ಯವಾಗಿ ಹಾಗೆ ಹೇಳಿರುವ ಪಕ್ಷಕ್ಕೆ. ಮುತ್ತಿನಂಥ ಮಾತು. ಅವರೇನೋ ಬಹಳ ಒಳ್ಳೆಯವರು. ಅಥವಾ ನಿನ್ನ ಮಾತಿನಲ್ಲಿ ಹೇಳಿದರೆ ಋಷಿಗಳಂಥವರು. ಆದರೆ ಅವರ ಭಾವನೆ ಶುದ್ಧ ಗೊಡ್ಡು ಭಾವನೆ. ಅದೇನೋ 'ಅವೊತ್ತು ಹೋಟಲು ತಿಂಡಿ ಕಾಫಿ ಬೈದಿರಿ ಅಂತ ಹೇಳಿದೆ. ಅಂದೆಯಲ್ಲಾ. ಹಿಂದೆ ಬೇರೆ ಅವರ ಬಳಿ ವಾದಿಸಿದ್ದೆಯೇನು?"

ಗಂಗಾಧರಯ್ಯ :—"ಬೇಕಾದಷ್ಟು ವಾದಿಸಿದ್ದೆ. ಅವರ ಕೆಲವು ಅಭಿಪ್ರಾಯಗಳೂ ನನ್ನ ಅಭಿಪ್ರಾಯಗಳೂ ಒಂದೇ ಸಮ. ಆದರಿಂದ ಅವರಿಗೆ ನನ್ನಲ್ಲಿ ಪ್ರೀತಿ. ಆ ಪ್ರೀತಿಯಿಂದಲೇ ಅವರು ನನ್ನನ್ನು ತಮ್ಮ ಜೊತೆ ಯಲ್ಲಿ ಮನೆಗೆ ಕರೆದುಕೊಂಡು ಹೋದದ್ದು."

ಚೊಕ್ಕಣ್ಣ :—"ಸರಿ ಮತ್ತೆ. ಅಷ್ಟು ಪ್ರೀತಿಯಿದ್ದ ಮೇಲೆ, ನೀನು ನಿನ್ನೆಯಿಂದ ಕೊರಗಲು ಕಾರಣ?"

ಗಂಗಾಧರಯ್ಯ :—"ನಾನು ಅವರ ಮನೆಯಿಂದ ಹೊರಡುವಾಗ ಅಧಿಕಪ್ರಸಂಗದ ಮಾತಾಡಿದೆ. ಅವರು ಒಂದೆರಡು ನಿಮಿಷ ಮೌನವಾಗಿ

ನಿಂತಿದ್ದು 'ನೀನು ಹೊರಡು' ಎಂದುಬಿಟ್ಟರು. ಅವರಿಗೆ ಕೋಪ ಬಂದಿರ ಬೇಕೆಂದು ನಿರ್ಧರಿಸಿದೆ, ಬಹಳ ಕೊರಗಿದೆ.

ಚೊಕ್ಕಣ್ಣ :—"ಇವೊತ್ತು ಅವರ ಕೋಪ ಇಳಿಸಿ ಬಂದೆಯೇನೋ! ಕೊರಗಿ ಸತ್ತಿದ್ದೀ ಅಂತ ಆಗಲೇ ಒದರಿದೆಯಲ್ಲಾ! ಜೀವ ಕೂಡಿಕೊಂಡಿರ ಬೇಕು, ಮತ್ತೆ ಅವರನ್ನು ಕಂಡ ಮೇಲೆ."

ಗಂಗಾಧರಯ್ಯ :—"ಅವರು ಋಷಿಯಂಥ ಮನುಷ್ಯರು. ಅವರ ಮನಸ್ಸಿಗೆ ಅಸಮಾಧಾನಮಾಡಿದೆನೆ—ಅಂತ ಬಹಳ ಪೇಚಾಡಿದೆ, ಬಹಳ ಕೊರಗಿದೆ."

ಚೊಕ್ಕಣ್ಣ :—"ಆಗಲೇ ಹೇಳಿದೆಯಲ್ಲ. ಕೊರಗಿ ಸತ್ತು ಹೋಗಿ ದ್ದೀನೀ ಅಂತ. ನೀನು ಬದುಕಿದ್ದೀ ಅಂತ ನಾನು ಭರವಸೆಯೂ ಕೊಟ್ಟದ್ದೇನಲ್ಲ. ನೀನು ಹಿಂದೆ ವಾದಿಸಿದ್ದೇನು? ಅದು ನಮಗೊಬ್ಬರಿಗೂ ತಿಳಿದೇ ಇರಲಿಲ್ಲ."

ಗಂಗಾಧರಯ್ಯ :—"ನೀವೆಲ್ಲಾ ತಿಂಡಿಗೆ ಓಡಿ ಹೋಗುತ್ತಿದ್ದಿರೀ ನೋಡು. ಅದರ ವಿಷಯವಾಗಿ ನಮ್ಮ ವಾದ ನಡೆಯಿತು. ಮೇಷ್ಟರಿಗೆ ನಾನು ನಿಮ್ಮಂತೆ ಕಾಫೀ ತಿಂಡಿಗಾಗಿ ಹೊಟಲಿಗೆ ಹೋಗುವವನಲ್ಲವೆಂತ ನನ್ನಲ್ಲಿ ಇಷ್ಟ. ನನ್ನ ವೈರಾಗ್ಯ ಕೈಯಲ್ಲಿ ಕಾಸಿಲ್ಲದ ಅಭಾವ ವೈರಾಗ್ಯವೆಂತ ಅವರಿಗೆ ಗೊತ್ತಿಲ್ಲ. ಅವರಿಗೆ ಇದನ್ನು ತಿಳಿಸಿಲ್ಲವಲ್ಲಾ—ಅಂತಲೂ ನಾನು ಪೇಚಾಡುತ್ತಿದೀನಿ. ಸಣ್ಣ ವಿಚಾರಗಳಲ್ಲಿ ಕೂಡ ಇದ್ದದ್ದನ್ನ ಇದ್ದಂತೆಯೇ ಹೇಳಿ ದೊಡ್ಡ ಬಾಳು ಬಾಳಬಹುದು. ಆದರೆ ಅದು ಮೇಷ್ಟರಂಥವರಿಗೇನೇ ಸಾಧ್ಯ. ನಾನು ಅವರಲ್ಲಿ ಮರೆಮಾಚಿರುವ ಸಂಗತಿಯನ್ನು ಅವರಿಗೆ ತಿಳಿಸಬೇಕೆಂತ ಆಸೆ. ಅವರದೆಷ್ಟು ಪರಿಶುದ್ಧ ಜೀವನ! ಕಪಟ ಮುಚ್ಚು ಮರೆ—ಇದೊಂದೂ ಅವರ ಬಳಿಗೇ ಸುಳಿಯುವಂತಿಲ್ಲ. ಈಗಿನ ಕಾಲದ ವಿದ್ಯೆಯಲ್ಲಿ ಪಾರಂಗತರಾಗಿ ಪ್ರೊಫೆಸರ್ ಕೆಲಸದಲ್ಲಿದ್ದರೂ ಹಿಂದಿನ ಸಂಪ್ರದಾಯ ಬಿಟ್ಟಿಲ್ಲ. ಅವರಷ್ಟು ಸಾಧ್ಯವಿಲ್ಲದಿದ್ದರೂ ಸ್ವಲ್ಪಮಟ್ಟಿಗಾದರೂ ಅವರಂತೆ ನಡೆದರೆ ನಾವು ಧನ್ಯರು ಕಣಯ್ಯ. ಆದರೆ ಅವರ ಹಾಗೆ

ಸ್ವಾರ್ಥವಿಲ್ಲದೆ ಕೆಲಸಮಾಡಬೇಕಲ್ಲಾ! ಸ್ವಾರ್ಥ, ಸ್ವಾರ್ಥ. ಚೊಕ್ಕಣ್ಣ ಸ್ವಾರ್ಥವೇ ಎಲ್ಲಕ್ಕೂ ಅಡ್ಡಿ.''

ಚೊಕ್ಕಣ್ಣ :—''ಹೌದು, ಹೌದು, ವೇದಾಂತ ಕೇಸರೀ, ಗುರುಭಕ್ತಿ ಚೂಡಾಮಣಿ, ಹಾಗೇ ಮಾಡುವೆಯಂತೆ. ಸದ್ಯಕ್ಕೆ ನೀನು ಅವರೊಡನೆ ವಾದಿಸಿದ್ದೇನು, ಹೇಳು.''

ಗಂಗಾಧರಯ್ಯ :—''ನಾನು ನಿಮ್ಮಂತೆ ಹೋಟಲಿನ ಕಾಫೀ ತಿಂಡಿಗೆ ಆಸೆಪಡುವವನಲ್ಲವೆಂದು ತಿಳಿದುಕೊಂಡರು. ಅವರಿಗೆ ಬಹಳ ಸಂತೋಷ ವಾಯಿತು. ನಾನು ಬಹಳ ಸಂಭಾವಿತ, ನಾಲಗೆಯ ಚಪಲ ತಡೆಯುವವನು ಅಂದುಕೊಂಡರು. ಕಾಫೀ ಬಸಿದುಕೊಳ್ಳುವ ನಿಮ್ಮಂಥವರನೆಲ್ಲ ಆಕ್ಷೇಪಿಸಿ ನನ್ನೊಡನೆ ತಮ್ಮ ಮನಸ್ಸಿನ ಭಾವನೆಗಳನ್ನೆಲ್ಲ ತಿಳಿಸಲು ಪ್ರಾರಂಭ ಮಾಡಿದರು. ಅನೇಕ ಸಲ ನಮ್ಮಿಬ್ಬರಿಗೂ ವಾದ ನಡೆದಿದೆ. ಹಲವು ಸಾರಿ ಅವರಿಗೆ ವಿರೋಧವಾಗಿ—ಆದರೆ ನಯವಾಗಿ—ಮಾತನಾಡಿ ವಾದಿಸಿದ್ದೀನಿ. ಮೊನ್ನೆಯಂತೂ ಆವೇಶಪೂರಿತರಾಗಿ ಹೇಳಿದರು, ''ಕಾಫೀ ವಾಸನೆ ಬಂದರೆ ಸಾಕು. ಸಮಯವೇ ಅಲ್ಲವೇ—ಎನ್ನೋದನ್ನೂ ನೋಡದೆ, ಹೀಗೆ ಮೇಲಿಂದ ಮೇಲೆ ಕಾಫೀ ಕುಡಿಯುವ ಜನರಿಂದ ಏನು ಚಿತ್ತ ಸಂಯಮ ತಾನೇ ಸಾಧ್ಯ? ಸಮಯ ಸಿಕ್ಕಿದರೆ ಸಾಕು; ಇವರ ಮೇಲೆ ಸೇಡು ತೀರಿಸ್ತೇನೆ. ಹೋಟಲು ತಿಂಡಿ, ಹೋಟಲು ಕಾಫಿ—ಎರಡೇ ಇವರ ಪರಮಾರ್ಥ. ಎಷ್ಟು ಅನಾರೋಗ್ಯ; ಎಷ್ಟು ಕೊಳಕು, ಎಷ್ಟು ಎಂಜಲು ಬೆರಕೆ, ಎಷ್ಟು ದುಡ್ಡು ಪೋಲು—ಇದೊಂದೂ ಇವರ ತಲೆಯೊಳಕ್ಕೇ ಹೋಗುವ ಹಾಗಿಲ್ಲ. ಲಕ್ಷಣವಾಗಿ ಎರಡು ಊಟ ಮಾಡಿಕೊಂಡು ಸುಮ್ಮ ನಿರಬಾರದೆ!'' ಎಂತ. ನಾನು ಹೇಳಿದೆ, ''ತಮ್ಮ ವಯಸ್ಸು ಬಂದಾಗ ಅವರೂ ಹಾಗೆಯೇ ಮಾಡಿಯಾರು, ಸಾರ್ ಅಷ್ಟರತನಕ ಸುಮ್ಮನೆ ನೋಡ್ತಿರಿ, ಸಾರ್" ಎಂತ. ಅವರು ಫಕ್ಕನೆ ನಕ್ಕು "ಅವರ ಹಣೆಯಲ್ಲೇ ಅದು ಬರೆದಿಲ್ಲ. ಬೆಳೆಯ ಸಿರಿ ಮೊಳೆಯಲ್ಲೇ ಈಗ ನೀನಿಲ್ಲವೆ, ಅವರಂತೆ ಮಾಡದೆ ಸಂಯಮ ತೋರಿಸುವುದಿಲ್ಲವೆ? ನಿನ್ನನ್ನು ನೋಡಿಯಾದರೂ ಅವರು ನಾಚಿಕೊಳ್ಳಬಾರದೆ? ನಿನಗೂ ಅವರಂತೆ ಚಿಕ್ಕ ವಯಸ್ಸು,

ಅವರಂತೆಯೇ ತಿನ್ನಬೇಕು, ಕುಡಿಯಬೇಕು—ಎಂದು ಆಸೆಯಾಗು ವುದಿಲ್ಲವೆ?" ಎಂದರು. ನಾನು, "ಹೋಟಲಿಗೆ ಹೋಗಬಾರದೆಂತ ನಾನು ಪ್ರತಿಜ್ಞೆಮಾಡಿಲ್ಲ. ಆದರೆ ಅವರಂತೆ ಅಲ್ಲಿಗೆ ಹೋಗಿ ತಿನ್ನುವುದಿಲ್ಲ. ಪ್ರಪಂಚವೇ ಒಂದು ವಿಚಿತ್ರ, ಸಾರ್. ಹಸಿದು ಸೊರಗುವವರು ಹಲವರು; ಮಿತಿ ಮೀರಿ ತಿಂದು ತೇಗುವವರು ಕೆಲವರು" ಎಂದೆ. ಮೇಷ್ಟರ ಆನಂದ ಹೇಳತೀರದು. ಅವರು ಹಿಗ್ಗಿ, "ಮುತ್ತಿನಂಥ ಮಾತು ಮುತ್ತಿನಂಥ ಮಾತು. ನನ್ನ ಜೊತೆಯಲ್ಲಿ ನಮ್ಮ ಮನೆಗೆ ಬಾ" ಎಂದು ಹೇಳಿದರು. ನಾನು ನಾಲಗೆಯ ಚಪಲವನ್ನು ತಡೆಯುತ್ತಿರುವುದಕ್ಕೆ ಕಾರಣವಾದ ನನ್ನ ಬಡತನದ ವಿಚಾರವನ್ನು ತಿಳಿಸಲಾರದೆ ಮರೆಮಾಚಿ ಸಂಕಟಪಡುತ್ತಾ ಅವರ ಜೊತೆಯಲ್ಲಿ ಅವರ ಮನೆಗೆ ಹೋದೆ. ಅನಂತರ ನಡೆದ ಸಂಗತಿ ಗಳನ್ನೆಲ್ಲಾ ಆಗಲೇ ನಿನಗೆ ಹೇಳಿದ್ದೀನಿ."

ಚೊಕ್ಕಣ್ಣ :—"ಇವೊತ್ತು ಅವರ ಮುನಿಸು ತಿಳಿಸಿ ಬಂದೆಯೇನೋ! ಎಷ್ಟು ಹಿಗ್ಗುತ್ತ ಹಾರಿ ಹಾರಿ ಬಂದೆಯೋ! ಅದಕ್ಕೇನು ಕಾರಣ ಮಹಾಪ್ರಭು?"

ಗಂಗಾಧರಯ್ಯ :—"ಅಯ್ಯೋ ಅದೊಂದು ಕಥೆ. ಎರಡು ಘಂಟೆ ಹೊಡೆದೇ ಹೋಯಿತು. ಆಮೇಲೆ ಹೇಳ್ತೀನಿ. ಕ್ಲಾಸಿಗೆ ಹೋಗೋಣ, ಏಳು, ಏಳು."

ಅವರಿಬ್ಬರೂ ಆತುರದಿಂದ ತರಗತಿಗೆ ಹೊರಟು ಹೋದರು. ಗಂಗಾಧರಯ್ಯ ಬಹಳ ಕಷ್ಟದಲ್ಲಿ ಬೆಳೆದವನು. ತೀರ ಚಿಕ್ಕ ವಯಸ್ಸಿನಲ್ಲೇ ತಾಯಿಯನ್ನು ಕಳೆದುಕೊಂಡು ಮಾತೃ ಪ್ರೇಮದಿಂದ ವಂಚಿತನಾಗಿದ್ದವನು. ತಂದೆಯು ಎರಡನೆಯ ಮದುವೆ ಮಾಡಿಕೊಂಡುದರ ಪರಿಣಾಮವಾಗಿ ಅವನಿಗೆ ಒದಗಿದ ಕಷ್ಟಗಳಿಗೂ, ದುಃಖಗಳಿಗೂ ಇತಿಮಿತಿಯೇ ಇರಲಿಲ್ಲ. ಅವನ "ಚಿಕ್ಕಮ್ಮ" ತಾನು ನೋಡಿಯೇ ಇಲ್ಲದಿದ್ದ ಸವತಿಯ ಮೇಲಿನ ಮಾತ್ಸರ್ಯವನ್ನೆಲ್ಲ ನಿರಪರಾಧಿಯಾದ ಬಾಲಕನ ಮೇಲೆ ತೋರಿಸುತ್ತಿದ್ದಳು. ಗಂಗಾಧರಯ್ಯನಿಗೆ ತಿಂಡಿಯ ಚಪಲವೇನೊ, ಇತರ ಬಾಲಕರಿಗಿಂತ ಬಹಳ ಹೆಚ್ಚು. ಆದರೆ, 'ಚಿಕ್ಕಮ್ಮ'ನ ಕಡೆಯಿಂದ ಅವನ ಸಂಯಮ ಪರೀಕ್ಷೆಯೇ

ನಡೆದುಹೋಯಿತು. ಕೆಲವು ಸನ್ನಿವೇಶಗಳಲ್ಲಿ ಮನುಷ್ಯರು ಎಷ್ಟು ಕೀಳುಮಟ್ಟಕ್ಕಿಳಿಯುತ್ತಾರೆಂಬುದನ್ನು ನಿಜವಾಗಿಯೇ ವರ್ಣಿಸಿದರೂ ನಂಬುವುದೇ ಕಷ್ಟವಾಗುತ್ತದೆ. ಗಂಗಾಧರಯ್ಯನ ಚಿಕ್ಕಮ್ಮನ ವರ್ತನೆಯೂ ಅದಕ್ಕೊಂದು ನಿದರ್ಶನ. ಬಡತನದ ದೆಸೆಯಿಂದ ತಿಂಡಿಗಳನ್ನು ಮಾಡುತ್ತಿದ್ದುದೇ ವಿರಳ. ಮಾಡಿದಾಗಲೂ ಒಂದು ಚೂರೂ ಮಗುವಿಗೆ ಸಿಕ್ಕುತ್ತಿರಲಿಲ್ಲ. ಪಾಪ! ಚಿಕ್ಕಮ್ಮನ ಘರ್ಜನೆತರ್ಜನೆಗಳಿಂದ ಭಯವು ಮಗುವಿನ ಮೂಳೆ ಮೂಳೆಗೂ ನಾಟಿ ಹೋಗಿದ್ದುದರಿಂದ ಅವನು ತುಟಿ ಪಿಟಕ್ಕೆನ್ನುವ ಹಾಗಿರಲಿಲ್ಲ. ಅವನು ಬಂದ ಕಷ್ಟವನ್ನೆಲ್ಲ ಮೂಕ ಸಂಕಟದಿಂದಲೇ ಅನುಭವಿಸುತ್ತಿದ್ದನು. ತಿಂಡಿಗಳು ಸಿದ್ಧವಾಗುತ್ತಿದ್ದಾಗಿನ ಸುವಾಸನೆಯಿಂದಲೇ ತೃಪ್ತಿಯನ್ನು ಕಾಣುವುದು ಅವನ ಪದ್ಧತಿಯಾಯಿತು. ಬಾಲ್ಯದಿಂದಲೂ ಬಲತ್ಕಾರವಾಗಿ ದಮನಮಾಡಿದ್ದ ನಾಲಗೆಯ ಚಪಲವು, ಅವನಿಗೆ ವಯಸ್ಸಾದಂತೆಲ್ಲ ವೃದ್ಧಿಯಾಗಿ ಅವನ ಪ್ರಾಣವನ್ನೇ ಹಿಂಡುತ್ತಿದ್ದಿತು. ಕಾಲೇಜು ವಿದ್ಯಾಭ್ಯಾಸಕ್ಕೆ ಬೆಂಗಳೂರಿಗೆ ಬಂದ ಮೇಲಂತೂ, ಬಡತನದ ದೆಸೆಯಿಂದ ಇನ್ನೂ ಕಾರ್ಪಣ್ಯ. ಕೈಯಲ್ಲಿ ಕಾಸಿಲ್ಲ. ಆದರೆ ಆತ್ಮಗೌರವಕ್ಕೆ ಹಾನಿಯಾಗುವಂತೆ ಮಾಡಿಕೊಳ್ಳುವುದು ಅವನಿಂದ ಸಾಧ್ಯವಿಲ್ಲ. ಧನಿಕರ ಮನೆಯಿಂದಲೋ ಹೋಟಲುಗಳಿಂದಲೋ ತಿಂಡಿಯ ವಾಸನೆಯು ಬಂದರೆ, ಅವನ ಮೂಗು ಅರಳುವುದು. ಅವನು ಹಣಗಾರರೆಷ್ಟು ಧನ್ಯರೋ ಎಂದುಕೊಳ್ಳುವನು; ಉತ್ತರ ಕ್ಷಣದಲ್ಲಿಯೇ ಅವರೆಲ್ಲರನ್ನೂ ಶಪಿಸಬೇಕೆಂದು ತೋರುವುದು. ಆಗ ಅವನು ತನ್ನ ಅವಿವೇಕಕ್ಕೆ ತಾನೇ ನಗುವನು. ವಾಸನೆಯಿಂದಲೇ ಮನಸ್ಸಿನ ತೃಪ್ತಿಯನ್ನು ಸಾಧಿಸಲು ಪ್ರಯತ್ನಿಸುವನು.

ಜಿಹ್ವಾ ಚಾಪಲ್ಯವನ್ನು ನಿರೋಧಿಸಿ ದಮನಮಾಡುವ ಪ್ರಯತ್ನವನ್ನು ಅವನು ಸಂತತವಾಗಿ ಹೆಚ್ಚಿಸುತ್ತಿದ್ದರೂ ಅದು ಒಂದೊಂದು ವೇಳೆ ಮಿತಿ ಮೀರಿ ಕೆರಳಿಬಿಡುವುದು. ಆಗ ತನ್ನ ನಾಲಗೆಯನ್ನೂ ತನ್ನ ಮನಸ್ಸನ್ನೂ ಹಿಡಿತದಲ್ಲಿಟ್ಟುಕೊಳ್ಳಲಾರದೆ ತಲ್ಲಣಿಸುವನು.

ಅವನು ಹೀಗೆ ತಲ್ಲಣಿಸುತ್ತಿದ್ದ ದಿನಗಳಲ್ಲಿ ಅವನು ಚೊಕ್ಕಣ್ಣನೊಡನೆ ಸಂಭಾಷಿಸಿದ ದಿನವೂ ಒಂದು. ಆ ದಿನ ಅವನು ಕಾಲೇಜಿನ ಉಪಾಹಾರ ಮಂದಿರದಿಂದ ಬರುತ್ತಿದ್ದ ತುಪ್ಪದ ಕನುಗಿನಿಂದ ಆಕರ್ಷಿತನಾಗಿ ಒಳಗೆ ಹೋದನು. ಅಲ್ಲಿ ಕರಿಯುತ್ತಿದ್ದ ತಿಂಡಿಗಳ ಸೊಗಸಿಗೆ ಮನಸೋತು—ಆ ದಿನ ತನ್ನ ಬಳಿಯಲ್ಲಿ ಎಂಟಾಣೆಗಳಿದ್ದುದರಿಂದ—ತಿಂಡಿಗಳನ್ನು ತನಗೆ ಕ್ರಯಕ್ಕೆ ಕೊಡಬೇಕೆಂದು ಕೇಳಿದನು. ಅಯ್ಯರು ಅವುಗಳನ್ನು ಕ್ರಯಕ್ಕೆ ಕೊಡುವುದಿಲ್ಲವೆಂದರು. ಗಂಗಾಧರಯ್ಯನು, "ನೀವೇ ತಿನ್ನೋದಕ್ಕೇನಾದರೂ ಇವುಗಳನ್ನು ಮಾಡಿದ್ದೀರೇನು? ಹಾಗೇನೂ ಇಲ್ಲವಲ್ಲಾ! ಮಾರೋದಕ್ಕೆ ತಾನೇ ಇಷ್ಟನ್ನೂ ಮಾಡ್ತಿದ್ದೀರಿ? ಯಾರಿಗೆ ಮಾರಿದರೇನು? ಯಾರು ತಿಂದರೇನು? ನಿಮಗೆ ದುಡ್ಡು ಬಂದರೆ ಸರಿತಾನೆ? ನನ್ನಲ್ಲಿ ಎಂಟಾಣೆ ನಗದಿದೆ. ಅಷ್ಟಕ್ಕೆ ಬರುವಷ್ಟು ಕೊಡಿ" ಎಂದುದನ್ನು ಕೇಳಿ ಅಯ್ಯರು ಗಹಗಹಿಸಿ ನಕ್ಕರು; ಅವನಿಗೆ "ನಾನು ತಿನ್ನೋಕ್ಕೂ ಮಾಡಿಲ್ಲ. ನಿಮಗೆ ಕೊಡೋಕ್ಕೂ ಮಾಡಿಲ್ಲ. ಎಂಟಾಣೆಯಲ್ಲ. ಎಂಟು ರೂಪಾಯಿ ಕೊಟ್ಟರೂ ಕೊಡೋಕ್ಕಾಗೊಲ್ಲ. ನಾಳೆ ಬೆಳಗ್ಗೆ ಕಾಲೇಜು ಡೇ ಸ್ಪೋರ್ಟ್ಸ್ ಅಲ್ಲವೋ! ಅದರ ಸಂಬಂಧದ 'ಆರ್ಡರ್'. ಹದಿನೈದು ಪ್ಲೇಟ್ ಸರಿಯಾಗಿ ತಿಂಡಿ ಮಾಡ್ತೀನಿ. ಹೆಚ್ಚಾಗಿ ಮಿಗೋಹಾಗಿಲ್ಲ. ಇಲ್ಲದಿದ್ರೆ ಖಂಡಿತಾ ಕೊಡ್ತಿದ್ದೆ. ನೀವೂ ತಿಂದು ಸಂತೋಷಪಡಬಹುದಾಗಿತ್ತು. ನೀವು ನಗದು ಹಣ ಕೊಡೋವಾಗ ಇಲ್ಲವೆಂದೇನೆ?" ಎಂದರು.

ಗಂಗಾಧರಯ್ಯನು ಪಶ್ಚಾತ್ತಾಪ ಹಾಕಿಕೊಂಡು "ಮೇಷ್ಟರ" ಬಳಿಗೆ ಹೋದನು. ಅವನು ಹೋದುದು ತಾನು ಅವರ ಮನೆಗೆ ಹೋಗಿದ್ದಾಗ ದುಡುಕಿ ಆಡಿದ ಮಾತುಗಳಿಗಾಗಿ ಅವರ ಕ್ಷಮೆಯನ್ನು ಬೇಡುವುದಕ್ಕಾಗಿ. ಅವನು ತಮಗೆ ಕೈ ಮುಗಿದೊಡನೆಯೇ ಅವರು "ಬಾರಯ್ಯಾ, ಬಾ. ನಾನೇ ನಿನಗೆ ಹೇಳಿಕಳುಹಿಸಬೇಕೆಂದಿದ್ದೆ. ನಿನ್ನ ಬುದ್ಧಿಶಕ್ತೀ ನೋಡಿಯೇ ನಾನು ಮೆಚ್ಚಿಕೊಂಡಿದ್ದೆ. ಈಗ ನಿನ್ನ ಗುಣವನ್ನ ನೋಡಿ ಅದಕ್ಕಿಂತ ಹೆಚ್ಚಾಗಿ ಮೆಚ್ಚಿಕೊಳ್ಳಬೇಕಾಗಿದೆ. ಇನ್ನು ಮೇಲೆ ಪ್ರತಿ ಭಾನುವಾರವೂ ನೀನು ನಮ್ಮ ಮನೆಗೆ ಬರಬೇಕು. ಸಣ್ಣ ವಿಚಾರದಿಂದ ಹಿಡಿದು ದೊಡ್ಡ

ವಿಚಾರದವರೆಗೂ, ನೀನು ಬಹಳ ಸ್ವಾರಸ್ಯವಾಗಿ ವಾದಿಸುತ್ತೀಯೆ,'' ಎಂದರು. ಆಗ ಗಂಗಾಧರಯ್ಯನ ಮನಸ್ಸಿಗೆ ಹೇಗಾಗಿರಬೇಕೆಂಬುದನ್ನು ಊಹಿಸಿಕೊಳ್ಳುವುದು ಮೇಲು. ಅದನ್ನು ವರ್ಣಿಸುವುದಂತೂ ಸಾಧ್ಯವಿಲ್ಲ. ಗಂಗಾಧರಯ್ಯನು ತಾನು ಅವರ ಮನೆಯಿಂದ ಬಂದಾಗಿನಿಂದ ಅವರ ಬಳಿಗೆ ಹೋಗುವವರೆಗೂ ಕೊರಗಿದುದನ್ನು ತಿಳಿಸಿದನು. ಅವರು ನಕ್ಕು, ಅವನ ಬೆನ್ನು ತಟ್ಟಿ, ''ಎಂಥಾ ಹುಚ್ಚು ಭಾವನೆ. ಹುಡುಗರು ದಿಟ್ಟತನದಿಂದ ವಾದಿಸಬೇಕು. ಅದು ನನಗೆ ಇಷ್ಟ. ಯಾವುದೇ ವಿಷಯವನ್ನಾಗಲಿ ಬಹುಮುಖವಾಗಿ ವಿಚಾರ ಮಾಡಬೇಕು. ಅದಿರಲಿ. ನಾನು ನಿನಗೆ ಹೇಳುತ್ತಲೇ ಇದ್ದೆ, ನೋಡು. ಮನಸ್ವಿಯಾಗಿ ಹೋಟಲು ತಿಂಡಿ ತಿನ್ನುವವರ ಮೇಲೆ ಸೇಡು ತೀರಿಸುತ್ತೇನೆಂತ. ನಾಳೆ ಬೆಳಗ್ಗೆ ತಿಂಡಿಸ್ಪರ್ಧೆ ಇಟ್ಟಿದೆ, ಕಾಲೇಜ್ ಡೇ ಸ್ಪೋರ್ಟ್ಸ್ ಸಂಬಂಧವಾಗಿ. ಆಗ ಅದಕ್ಕೆ ತಕ್ಕ ಸಮಯ ಸಿಕ್ಕಿದೆ. ಸ್ಪರ್ಧೆಗೆ ನಾಲ್ಕಾಣೆ ಶುಲ್ಕ ಕೊಡಬೇಕೆಂತ ಗೊತ್ತು ಮಾಡಿದ್ದೇನೆ. ಹದಿನೈದು ಜನ ಸೇರಬೇಕು. ಈಗಾಗಲೇ ಹದಿಮೂರು ಜನ ಸೇರಿದ್ದಾರೆ. ಇನ್ನಿಬ್ಬರು ಸೇರಿಬಿಟ್ಟರೆ, ಆ ಹದಿನೈದು ಜನಕ್ಕೂ ಶಾಸ್ತಿ ಮಾಡಬಹುದು. ಅವರ ಮೇಲೆ ಸೇಡು ತೀರಿಸುತ್ತೇನೆ'' ಎಂದರು. ಗಂಗಾಧರಯ್ಯನ ಮನಸ್ಸಿನ ಮುಂದೆ ಹಲವು ಚಿತ್ರಗಳು ಸುಳಿದುಹೋದವು. ಅಯ್ಯರು ಹೇಳಿದ ''ನಾಳೆ ಬೆಳಗ್ಗೆ ಕಾಲೇಜ್ ಡೇ ಸ್ಪೋರ್ಟ್ಸ್ ಅಲ್ಲವೋ! ಅದರ ಸಂಬಂಧದ ಆರ್ಡರ್. ಹದಿನೈದು ಪ್ಲೇಟ್ ಸರಿಯಾಗಿ ತಿಂಡಿ ಮಾಡ್ತೀನಿ'' ಎಂಬ ಮಾತುಗಳು ಕಿವಿಯಲ್ಲಿ ತಮಟೆ ಹೊಡೆಯತೊಡಗಿದುವು. ''ಅಷ್ಟು ತಿಂಡಿಯ ಜೊತೆಗೆ ಹಾಲೋ ಅಥವಾ ಕಾಫಿಯೋ ಬಿದ್ದುಬಿಟ್ಟರೆ!'' ಎಂದಿತು ಮನಸ್ಸು. ಅವನ ಮನಸ್ಸೇ ಹಿಡಿತ ತಪ್ಪುವಷ್ಟು ಸಂತೋಷ ವಾಯಿತು. ಅವನು ತನ್ನಲ್ಲಿ ತಾನು ''ಒಂದು ಪ್ಲೇಟಿಗೆ ಎರಡು ಮೂರು ರೂಪಾಯಿಗಳು ಬಾಳುವಷ್ಟು ತಿಂಡಿ. ನಾಲ್ಕು ಆಣೆ. ಗೆದ್ದರೆ ಬಹುಮಾನ ಬೇರೆ. ಎಂಥ ಮೇಷ್ಟರು! ಏನು ಭರ್ಜರಿ ಸೇಡು!'' ಎಂದುಕೊಂಡನು. ಮೇಷ್ಟರು ''ಏನಯ್ಯ! ಮಾತೇ ಇಲ್ಲ. ಏನೋ ಗುಣಾಕಾರ ಹಾಕುತ್ತ

ಹುಚ್ಚನ ಹಾಗೆ ನಿಂತಿದ್ದೀಯೆ,'' ಎಂದರು. ಗಂಗಾಧರಯ್ಯನು ''ನನ್ನೂ ದಯವಿಟ್ಟು ಸೇರಿಸಿಬಿಡಿ, ಸಾರ್. ತಮ್ಮ ಪ್ರೀತಿಯನ್ನಂತೂ ಕಂಡು ಬೆರಗಾಗಿದ್ದೀನಿ. ತಮ್ಮ ಸೇಡಿನ ಸವಿಯನ್ನೂ ನೋಡುವ ಆಸೆ. ತಿಂಡಿ ಸ್ಪರ್ಧೆಗೆ ನಾನೂ ಸೇರ್ತೀನೆ,'' ಎಂದು ಹೇಳಿ ನಾಲ್ಕಾಣೆಯ ಬಿಲ್ಲೆಯನ್ನು ಮೇಜಿನ ಮೇಲಿಟ್ಟನು. ಮೇಷ್ಟರು ನಕ್ಕು ''ನಿನ್ನ ಮೇಲೆ ಸೇಡು ತೀರಿಸ ಬೇಕಾಗಿಲ್ಲ. ನೀನೇಕೆ ಸೇರಬೇಕು? ನೀನು ಯಾವುದಕ್ಕೂ ಸೇರಿಲ್ಲ. ಇನ್ನೂ 'ರನ್ನಿಂಗ್ ರೇಸ್,' 'ಸ್ಯಾಕ್ ರೇಸ್' ಮುಂತಾದ್ದೆಲ್ಲಾ ಇವೆ. ಇದು ಸೇಡು ತೀರಿಸುವ ಪ್ರಸಂಗ. ಇದಕ್ಕೊಂದಕ್ಕೆ ಮಾತ್ರ ನೀನೇಕೆ ಸೇರುತ್ತೀ'' ಎಂದರು. ಗಂಗಾಧರಯ್ಯನು, ''ತಮ್ಮ ಪ್ರೀತಿಯಂತೆಯೇ ತಮ್ಮ ಸೇಡೂ ಮಧುರ ಸಾರ್. ತಮ್ಮ ಸೇಡಿನ ಸವಿಯನ್ನೂ ಅನುಭವಿಸೋಣವೆಂತ ಆಸೆ. ನನ್ನೂ ಸೇರಿಸಿಕೊಳ್ಳಿ ಸಾರ್. ದಯವಿಟ್ಟು ಸೇರಿಸಿಕೊಳ್ಳಿ ಸಾರ್'' ಎಂದು ಹೇಳಿ ಅಂಗಲಾಚಿ ಬೇಡಿದನು. ಮೇಷ್ಟರು, ''ಹಾಗಿದ್ದರೆ, ಅಗತ್ಯವಾಗಿ ಆಗಲಿ. ನೀನೇ ಸೇರಬೇಕೆಂದರೆ ನಾನೇಕೆ ಬೇಡವೆನ್ನಲಿ? ಸರಿ. ಇನ್ನೊಬ್ಬ ಸೇರಿಬಿಟ್ಟರೆ, ಹದಿನಾಲ್ಕು ಮಂದಿ'' ಎಂದರು. ಗಂಗಾ ಧರಯ್ಯನು ಅವರ ಅಪ್ಪಣೆ ಪಡೆದು ಅಪಾರ ಸಂತೋಷದಿಂದ ಅವರ ಕೊಟಡಿಯಿಂದ ಹೊರಬಿದ್ದು ಮಹಡಿಯ ಮೆಟ್ಟಲುಗಳನ್ನಿಳಿದು ಬರುತ್ತಿದ್ದನು. ಚೊಕ್ಕಣ್ಣನು ಅವನನ್ನು ತಡೆದು ನಿಲ್ಲಿಸದೆ ಹೋಗಿದ್ದರೆ, ಭಾವನಾಪ್ರಪಂಚದಲ್ಲಿ ವೈಮರೆತು ಅತ್ಯಂತ ಸಂತೋಷದಿಂದ ಇಳಿದ ರಭಸದಲ್ಲಿ ಅವನು ಕೆಳಕ್ಕುರುಳಿದ್ದರೂ ಆಶ್ಚರ್ಯವೆನಿಸುತ್ತಿರಲಿಲ್ಲ. ಆ ಬಳಿಕಲೇ ಅವರಿಬ್ಬರೂ ಈ ಮೊದಲೇ ತಿಳಿಸಿರುವಂತೆ ಮಾತನಾಡಿ ತರಗತಿಗೆ ಹೋದುದು.

ಅಂದು ತರಗತಿಯ ಕೆಲಸವು ಪೂರೈಸಿದ ಮೇಲೆ ಗಂಗಾಧರಯ್ಯನು ''ಮೇಷ್ಟರ'' ಕೊಟಡಿಯಲ್ಲಿ ನಡೆದುದನ್ನೆಲ್ಲಾ—ತನ್ನದೇ ಆದೊಂದು ಬಳಸು ಮಾತಿನ ವೈಖರಿಯಲ್ಲಿ—ಆತುರದ ಚೊಕ್ಕಣ್ಣನಿಗೆ ತಿಳಿಸಿದನು; ಹದಿನೈದರಲ್ಲಿ ಉಳಿದಿದ್ದ ಒಂದು ಸ್ಪರ್ಧಾಸ್ಥಾನಕ್ಕೆ ಸೇರುವಂತೆ ಅವನನ್ನು

ಪ್ರೇರಿಸಿದನು. ಚೊಕ್ಕಣ್ಣನು "ಚಳಿಯ ಕೊರತದಲ್ಲಿ ಬೆಳಗ್ಗೆ ಎಂಟು ಘಂಟೆಗೆ ನಾನು ಖಂಡಿತ ಬರೋದಿಲ್ಲ. ನಂಗೆ ಈ ತಂಟೆಯೇ ಬೇಡ. ನಿನ್ನ ಬಲವಂತಕ್ಕೆ ಒಪ್ಪಿಕೊಂಡು ಯಾರೋ ಪಾಡುಪಟ್ಟಾರು? ನಿಂಗೆ ಪ್ರೈಜ್ ಬರಲಯ್ಯ, ಹೊಡೆತಾ ಜೋಡಿ!" ಎಂದು ಹೇಳಿ ಹೊರಟೇ ಹೋದನು. ಆ ದಿನ ರಾತ್ರಿ ಗಂಗಾಧರಯ್ಯನಿಗೆ ಓದು ಸೊಗಸಲಿಲ್ಲ. ಬೇಗ ನಿದ್ರೆಯೂ ಬರಲಿಲ್ಲ. ಬೆಳಗ್ಗೆ ಏಳುವೇಕೆಂಬ ಕುತೂಹಲ ಬೇರೆ.

ಬೆಳಗ್ಗೆ ಎಂಟು ಘಂಟೆಗೆ ಕಾಲೇಜಿನ ಆಟದ ಬಯಲಿನಲ್ಲಿ ಕೋಲಾಹಲವೋ ಕೋಲಾಹಲ; "ಕಾಲೇಜ್ ಡೇ" ಉತ್ಸವದ ಸಂಬಂಧದಲ್ಲಿ ನಡೆಯುವ ಆಟಪಾಟಗಳ ಸ್ಪರ್ಧೆಯ ಸಡಗರವನ್ನು ನೋಡಿರುವವರಿಗೆ ಅದನ್ನು ವರ್ಣಿಸಿ ತಿಳಿಸಬೇಕಾದ ಆಗತ್ಯವಿಲ್ಲ. ಉಳಿದವರಿಗೆ ಅದನ್ನು ವರ್ಣಿಸಿ ತಿಳಿಸಿ ಪ್ರಯೋಜನವಿಲ್ಲ. ಅದರ ಪೂರ್ಣ ಪರಿಚಯವು ಅದನ್ನು ಕಣ್ಣಾರೆ ನೋಡುವುದರಿಂದ ಮಾತ್ರವೇ ಸಾಧ್ಯ. ಗಂಗಾಧರಯ್ಯನು ತನ್ನ ಸ್ಪರ್ಧೆಯ ಸರದಿಯು ಎಷ್ಟು ಹೊತ್ತಿಗೆ ಬಂದೀತೋ—ಎಂದು ಉತ್ಸಾಹದಿಂದಲೂ ಕುತೂಹಲದಿಂದಲೂ, ಒಂದೊಂದು ಕ್ಷಣವನ್ನೂ ಒಂದೊಂದು ಯುಗವಾಗಿ ಕಳೆಯುತ್ತಿದ್ದನು. ಹದಿನೈದು ಮಂದಿಗಳನ್ನೂ ಸಾಲಿಗೆ ನಿಲ್ಲಿಸಿದಾಗ ಅವನ ಸಂತೋಷವೇ ಸಂತೋಷ. ಬಹಳ ದೂರದಲ್ಲಿ ತಿಂಡಿಯ ತಟ್ಟೆಗಳ ಸಾಲು ಕಂಗೊಳಿಸುತ್ತಿದ್ದಿತು ಸ್ಪರ್ಧಿಗಳೆಲ್ಲರೂ ಓಡಿಹೋಗಿ ತಮ್ಮ ತಮ್ಮ ಪಾಲಿಗೆ ಬಂದ ತಟ್ಟೆಯಲ್ಲಿದ್ದ ತಿಂಡಿಯನ್ನು ತಿಂದು ಮತ್ತೆ ಹಿಂದಕ್ಕೆ ಓಡಿ, ಮೊದಲು ಹೊರಟ ಸ್ಥಳವನ್ನು ಸೇರಬೇಕು ಹಾಗೆ ಸೇರಿದವರಲ್ಲಿ ಮೊದಲನೆಯವನಿಗೂ, ಎರಡನೆಯವನಿಗೂ ಮತ್ತು ಮೂರನೆಯವನಿಗೂ ಬಹುಮಾನಗಳು. ತಟ್ಟೆಗಳ ಸಾಲಿನ ಹಿಂದೆ "ಮೇಷ್ಟರು" ನಿಂತಿದ್ದರು. ಗಂಗಾಧರಯ್ಯನು ತಟ್ಟೆಗಳ ಕಡೆಗೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದನು. ಸ್ಪರ್ಧಿಗಳು ಓಡಲು ಎಷ್ಟು ಹೊತ್ತಿಗೆ ಘಂಟೆಯ ಧ್ವನಿ ಯಾದೀತೋ ಎಂದು ಮೈಯೆಲ್ಲ ಕಿವಿಯಾಗಿ ಆಲಿಸುತ್ತಿದ್ದನು. ಉತ್ಸಾಹ ಭರದಲ್ಲಿ ಗೆರೆಯಿಂದ ಮುಂದಕ್ಕೆ ಕಾಲಿಟ್ಟದ್ದುದನ್ನು ಎರಡು ಸಾರಿ ತಪ್ಪಿಸ

ಬೇಕಾಯಿತು. ಘಂಟೆಯ ಧ್ವನಿಯನ್ನು ಕೇಳಿದುದೇ ತಡ. ಸ್ಪರ್ಧಿಗಳೊಡನೆ ಬೀಸುಗಾಲಿನಿಂದ ಓಡಿದ ರಭಸದಲ್ಲಿ ಅವನೇ ಇತರರಿಗಿಂತ ಮುಂಚೆ ತಿಂಡಿಯ ತಟ್ಟೆಗಳ ಬಳಿಗೆ ಸೇರಿದನು. ಮೇಷ್ಟರು ಅದನ್ನು ಕಂಡು ಅತ್ಯಂತ ಹರ್ಷದಿಂದ "ಭೇಷ್, ಭೇಷ್. ಹಿಂತಿರುಗುವಾಗಲೂ ಹೀಗೇ ಓಡಿದರೆ ಫಸ್ಟ್ ಪ್ರೈಜ್ ಕಟ್ಟಿದ ಬುತ್ತಿ" ಎಂದರು. ಆದರೆ ನಡೆದ ಕಥೆಯೇ ಬೇರೆ. ಸ್ಪರ್ಧಿಗಳೆಲ್ಲರೂ ತಮ್ಮ ತಟ್ಟೆಗಳನ್ನು ಬರೀದು ಮಾಡಿ ಹೊರಟು ಹೋದರೂ, ಗಂಗಾಧರಯ್ಯನು ತಲೆಯನ್ನು ತಗ್ಗಿಸಿ ಬಾಯಾಡಿಸಿ ತಿನ್ನುತ್ತಲೇ ಕುಳಿತಿದ್ದನು. ಅವನು ಮೊಟ್ಟ ಮೊದಲನೆಯ ಬಹುಮಾನ ದೊರೆಯುವ ಸುಯೋಗವನ್ನು ಕಳೆದುಕೊಂಡನಲ್ಲಾ—ಎಂಬ ವಿಷಾದದಿಂದ "ಮೇಷ್ಟರು" ಅವನ ಬಳಿಗೆ ಬಂದು, "ಏನಯ್ಯ! ಇನ್ನೂ ತಿನ್ನುತ್ತಲೇ ಇದ್ದೀಯೆ. ಅವರೆಲ್ಲರೂ ತಿಂದು ಮುಗಿಸಿ ಓಡಿಹೋದರು. ನೀನು ಇಲ್ಲಿಗೆ ಮೊದಲೇ ಓಡಿಬಂದೆ. ಇಲ್ಲಿಂದ ಹೋಗುವಾಗಲೂ ಮೊದಲನೆಯವನೇ ಆಗಬಹುದಾಗಿತ್ತು. ಫಸ್ಟ್ ಪ್ರೈಜ್ ಖಂಡಿತ ಬರುತ್ತಿತ್ತು. ಎಲ್ಲಾ ಕೆಡಿಸಿಕೊಂಡು ಕೂತಿದ್ದೀಯೆ" ಎಂದರು. ಗಂಗಾಧರಯ್ಯನು "ನಾನು ಈ ಸ್ಪರ್ಧೆಗೇ ಸೇರಬಾರದಾಗಿತ್ತು, ಸಾರ್" ಎಂದು ಉತ್ತರ ಕೊಟ್ಟುದ್ದಕ್ಕೆ ಆಶ್ಚರ್ಯಪಟ್ಟು "ನಿನ್ನೆ ನಾನೇ ಬೇಡವೆನ್ನಲಿಲ್ಲವೆ? ನೀನು ಸೇರಿದ್ದೇಕೆ? ಸೊಗಸಾಗಿ ಓಡಿಬಂದವನು ಫಸ್ಟ್ ಪ್ರೈಜ್ ಬರುವ ಅವಕಾಶ ಕಳೆದುಕೊಂಡು ಸುಮ್ಮನಾದದ್ದೇಕೆ? ಹುಚ್ಚ, ಹುಚ್ಚ," ಎಂದರು. ಗಂಗಾಧರಯ್ಯನು "ನಿನ್ನೆ ಅಯ್ಯರ ಕೈಯಲ್ಲಿ ಅಷ್ಟೊಂದು ತಿಂಡಿ ಮಾಡಿಸಿ, ಇವೊತ್ತು ಬೆಳಗ್ಗೆ ಹೀಗೆ ಮಾಡುತ್ತೀರೆಂತ ಕನಸಿನಲ್ಲಿಯೂ ಭಾವಿಸಿರಲಿಲ್ಲ. ಹದಿನೈದು ಪ್ಲೇಟು ಎಂಥಾ ತಿಂಡಿ! ಅಯ್ಯರನ್ನೇ ಕೇಳಿ, ಸಾರ್. ತಾವು ಹೀಗೆ ಮಾಡಬಹುದೆ, ಸಾರ್? ಎಲ್ಲಾ ಮೇಲ್ವಿಚಾರಣೇನೂ ತಮ್ಮದೇ ಆಗಿದೆ." ಎಂದುದನ್ನು ಕೇಳಿ ಕಕ್ಕುಬಿಕ್ಕಾದರು. ಆ ವೇಳೆಗೆ ದೂರದಿಂದ ಅಯ್ಯರೂ ಆ ಕಡೆಗೇ ಬರುತ್ತಿದ್ದರು. ಮೇಷ್ಟರು "ಇದೇನಯ್ಯ ನಿನ್ನ ಮಾತು! ಅರ್ಥವೇ ಆಗೊಲ್ಲ. ರೀ ಅಯ್ಯರ್, ಇಲ್ಲಿ ಬನ್ನಿ ಬೇಗ"

ಎಂದರು. ಅವರು ತಮ್ಮನ್ನು ಕೂಗಿದ ರಭಸಕ್ಕೆ ಅಯ್ಯರು ತಮ್ಮಿಂದ ಏನು ತಪ್ಪಾಯಿತೋ—ಎಂದು ಓಡಿಬಂದರು. ಮೇಷ್ಟರು ಪ್ರೊಫೆಸರ್ರು "ರೀ ಅಯ್ಯರ್! ನಿನ್ನೆ ನೀವು ಹದಿನೈದು ಪ್ಲೇಟ್ ಭಾರಿ ತಿಂಡಿ ಮಾಡಿದ್ದಿರಾ?" ಎಂದು ಕೇಳಿದರು. ಅಯ್ಯರು "ಹೌದು, ಸಾರ್. ಹದಿನೈದು ಮೇಷ್ಟರು ಸೇರಿ ಇವೊತ್ತು ಬೆಳಿಗ್ಗೆ ಏಳು ಘಂಟೆಗೇ—ಸರಿಯಾಗಿ ಏಳು ಘಂಟೆಗೇ—ಕೊಡಬೇಕೆಂತ ಹದಿನೈದು ಪ್ಲೇಟ್ ತಿಂಡಿಗೆ ಆರ್ಡರ್ ಕೊಟ್ಟಿದ್ದರು. ಸಪ್ಲೈ ಮಾಡಿಬಿಟ್ಟೆ. ನಿನ್ನೆ ಅದಕ್ಕೇ ತಿಂಡಿ ಮಾಡಿದ್ದು. ಅವರೂ 'ತಿಂಡಿ ಸೊಗಸಾಗಿದೆ' ಎಂದು ಹೇಳಿ ಸಂತೋಷವಾಗಿ ತಿಂದರು, ಸಾರ್" ಎಂದು ಹೇಳಿದರು. ಮೇಷ್ಟರು ಅವರನ್ನು ಬೀಳ್ಕೊಂಡು ಕಳುಹಿಸಿದ ಮೇಲೆ ಗಂಗಾಧರಯ್ಯನು "ಸರಿ ಸಾರ್, ಈಗ ಅರ್ಥವಾಯಿತು. ನಾನು ತಪ್ಪು ತಿಳಿದುಕೊಂಡಿದ್ದೆ. ಹೋಟಲು ತಿಂಡಿಗೆ ಬಾಯಿ ಬಿಡುವವರ ಮೇಲೆ ಸೇಡು ತೀರಿಸುವುದಾಗಿ ತಾವು ಹೇಳಿದ್ದಿರಿ. ನಾನು ಸೇರುವುದು ತಮಗೆ ಇಷ್ಟವೂ ಇರಲಿಲ್ಲ. ನಾನು ಸೇರಬಾರದಾಗಿತ್ತು. ಆದರೂ ಇದು ಒಂದು ತಮಾಷೆ, ಸಾರ್. ಈ ಅವಲಕ್ಕಿ, ಬೆಲ್ಲ, ಕೊಬ್ಬರಿಯೇ ಖಾಯಂ. ಗಬಕ್ಕನೆ ತಿಂದರೆ ಅಜೀರ್ಣವಾದೀತೂ, ಅಂತ ಅಗಿದು ತಿಂತಾ ಇದ್ದೀನಿ, ಸಾರ್. ಇದೂ ಒಂದು ರೀತಿ ಚೆನ್ನಾಗಿಯೇ ಇದೆ. ನಾನು ತಮ್ಮ ಸೇಡೂ ಮಧುರವೆಂದಿರಲಿಲ್ಲವೆ ನಿನ್ನೆ? ಒಂದು ರೀತಿ ಮಧುರವಾಗಿದೆ. ಅವರಿಗೆಲ್ಲಾ ಇದನ್ನ ಸರಿಯಾಗಿ ಅಗಿಯದೆ ನುಂಗಿ ಓಡಿಹೋಗಲು ಕಷ್ಟವಾಗಿರಬೇಕು. ಭರ್ಜರಿ ಸೇಡು. ಹಲ್ವಾ, ದಮರೋಟು ನುಂಗೋದಕ್ಕೂ ಅವಲಕ್ಕಿ, ಕೊಬ್ಬರಿ ಬೆಲ್ಲ ಅಗಿಯೋದಕ್ಕೂ ತುಂಬ ವ್ಯತ್ಯಾಸ, ಸಾರ್," ಎಂದು ಹೇಳಿ ಹಲ್ಲು ಕಿರಿದ. ಮೇಷ್ಟರು ಘೊಳ್ಳನೆ ನಕ್ಕರು. ಅವನು ಆಶಾಭಂಗವಾದ ಕಾರಣದಿಂದ, ಶಕ್ತಿಯಿದ್ದೂ ಸ್ಪರ್ಧೆಯಲ್ಲಿ ಬಹುಮಾನವನ್ನು ಕಳೆದು ಕೊಂಡನೆಂಬುದೂ ಅವರಿಗೆ ತೋರದಿರಲಿಲ್ಲ. ಅವರು ಪ್ರೀತಿಯಿಂದ ಅವನ ಬೆನ್ನು ತಟ್ಟಿ 'ಹುಚ್ಚ, ಹುಚ್ಚ. ಭಾನುವಾರ ಮಧ್ಯಾಹ್ನದ ಮೇಲೆ ಮೂರು ಘಂಟೆಗೆ ಖಂಡಿತ ನಮ್ಮ ಮನೆಗೆ ಬರಬೇಕು. ನಾಡಿದ್ದೇ ಭಾನುವಾರ.

ಮರೆಯಬೇಡ'' ಎಂದರು. ಗಂಗಾಧರಯ್ಯನು ಸಂತೋಷದಿಂದ ಹಲ್ಲುಕಿರಿದು ''ತಾವೆಷ್ಟು ಒಳ್ಳೆಯವರು ಸಾರ್! ತಮ್ಮ ಶಿಷ್ಯರಾಗಿರೋದು, ತಾವು ಹೀಗಿರೋದು, ಇದೆಲ್ಲಾ ನಮ್ಮ ಪುಣ್ಯ ಸಾರ್'' ಎಂದು ಉತ್ತರ ಹೇಳಿದ. ತಮ್ಮ ಕಣ್ಣುಗಳು ಒದ್ದೆಯಾದುದು ಅವನಿಗೆ ಗೋಚರವಾಗದಂತೆ ಬೇರೆ ಕಡೆಗೆ ತಲೆಯನ್ನು ತಿರುಗಿಸಿ, ''ಮೇಷ್ಟರು'' ಸರಕ್ಕನೆ ಹೊರಟು ಹೋದರು.

